# ಅನುಕ್ರಮಣಿಕೆ.



........

# ಪ್ರಕಾಶಕರ ಬಿನ್ನಹ.



**ಸತ್ಯಮೇವ ಜಯತೆ!** ಎಂಬ ಚಾಲುಕ್ಯಸಮ್ರಾಟನಾದ ೨ನೇ ಪುಲಿಕೇಶಿಯ ಕಾಲದ ಈ ಅತ್ಯುತ್ತಮ ಐತಿಹಾಸಿಕ ಕಥಾನಕವನ್ನು ನಮ್ಮ ಪ್ರಿಯಮಿತ್ರ ಶ್ರೀಯುತ **ನಾಗೇಶರವರು ಗ್ರಂಥಮಾಲೆ**ಗೆಂದು ಬರ ಕೊಟ್ಟಿರುತ್ತಾರೆ. ಈ ಕಥೆಯು ಎಷ್ಟು ಉಜ್ವಲ ಧ್ಯೇಯಗಳಿಂದ ತುಂಬಿ ರುತ್ತದೆಂಬದು ಇದನ್ನು ಓದುವ ಪ್ರತಿಯೊಬ್ಬ ವಾಚಕರಿಗೂ ಸಹಜ ವಾಗಿ ಖಾತ್ರಿಯಾಗುವಂತಿದೆ. ನಮ್ಮ ಮಿತ್ರರು ಇಂಥ ಉತ್ತಮ ಪುಸ್ತ ಕವನ್ನು ಬರೆದು ಕನ್ನಡ ನುಡಿಯನ್ನೂ, ಕನ್ನಡಿಗರನ್ನೂ, ಶ್ರೀ ಶೇಷಾಚಲ ಗ್ರಂಥಮಾಲೆಯನ್ನೂ ಅತ್ಯಂತ ಋಣಿಯಾಗಿ ಮಾಡಿಕೊಂಡಿರುತ್ತಾರೆ. ಈ ಗ್ರಂಥಕರ್ತರ ಇನ್ನೂ ಹಲವು ಕೃತಿಗಳನ್ನು ಗ್ರಂಥಮಾಲೆಯು ತನ್ನ ವಾಚಕರೆದುರಿಗೆ ಇಡಬೇಕೆಂದಿರುತ್ತದೆ. ಶ್ರೀ ಶೇಷಾಚಲ ಸದ್ಗುರುವು ನಮ್ಮ ಪ್ರಿಯಮಿತ್ರರಿಗೆ ಆಯುರಾರೋಗ್ಯಗಳನ್ನೂ ಸಕಲ ಸೌಕರ್ಯ ಗಳನ್ನೂ ಒದಗಿಸಿ ಕೊಡಲೆಂದೂ; ಗ್ರಂಥಮಾಲೆಯ ಅಭೀಷ್ಟವನ್ನು ಕೊನೆ ಗಾಣಿಸಬೆಂದೂ ಆ ಸದ್ಗುರುವರನನ್ನು ಬಿನ್ನಯಿಸುವೆವು.

ಆನಂದವನ,
ತಾ|| ೨೧-೭-೩೨

ಪ್ರಕಾಶಕ.



॥ಶ್ರೀ॥

# ಸತ್ಯಮೇವ ಜಯತೆ!

## ಪ್ರ ತಿ ಜ್ಞೆ.



ರೇವಾನದಿಯಿಂದ ಕನ್ಯಾಕುಮಾರಿಯ ವರೆಗೆ ಕರ್ನಾಟಕ ಸಾಮ್ರಾಜ್ಯದ ದಿಗ್ವಿಜಯ ದುಂದುಭಿಯನ್ನು ಮೊಳಗಿಸಿ, ದಿಗಂತಖ್ಯಾತಿಯನ್ನು ಪಡೆದ ಚಾಲುಕ್ಯ ಸಮ್ರಾಟನಾದ ರಣಪರಾಕ್ರಮ ಕೀರ್ತಿವರ್ಮನು ಅದೇ ಮೃತನಾಗಿದ್ದನು. ವಾತಾಪಿಪುರ ಸಿಂಹಾಸನದಲ್ಲಿ ಯುವರಾಜನಾದ ಎರಡನೆಯ ಪುಲಿಕೇಶಿಯು ಇನ್ನೂ ವಿರಾಜಮಾನನಾಗಿರಲಿಲ್ಲ. ಕೀರ್ತಿವರ್ಮನ ಮಲತಮ್ಮನೂ, ಪುಲಿಕೇಶಿಯ ಚಿಕ್ಕಪ್ಪನೂ ಆದ ರಣವಿಕ್ರಾಂತ ಮಂಗಳೇಶನು ಈಗ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಿದ್ದನು. ಯುವರಾಜನಾದ ಎರಡನೆಯ ಪುಲಿಕೇಶಿಯೂ, ಅವನ ಬಂಧುಗಳಾದ ವಿಷ್ಣುವರ್ಧನ-ಜಯಸಿಂಹವರ್ಮರೂ ಇನ್ನೂ ಚಿಕ್ಕವರಿದ್ದರು.

ಕನ್ಯಾಕುಮಾರಿಯಿಂದ ಹಿಮಾಚಲದ ವರೆಗೆ ಕರ್ನಾಟಕ ಸಾಮ್ರಾಜ್ಯವನ್ನು ಪ್ರಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆಯುಳ್ಳವನಾಗಿದ್ದ ಕೀರ್ತಿವರ್ಮನ ಅಕಾಲ ನಿಧನದಿಂದ ಸಾಮ್ರಾಜ್ಯಕ್ಕೆ ಬಲವಾದ ಹಾನಿಯು ತಟ್ಟಿತ್ತು. ಸಮರಭೂಮಿಯಲ್ಲಿ ಹತಾಶರಾಗಿ ಮಾಂಡಲಿಕತ್ವವನ್ನು ವಹಿಸಿದ್ದ ಮೌರ್ಯ, ನಳ, ಗಂಗ, ಪಲ್ಲವ, ಕದಂಬ, ರಾಷ್ಟ್ರಕೂಟ ಮೊದಲಾದ ಅರಸರು ಇದೇ ಸಂಧಿಯಲ್ಲಿ ಸ್ವತಂತ್ರರಾಗತೊಡಗಿದ್ದರು. ಕೆಲವರಂತೂ ವಾತಾಪಿಪುರದ ಮೇಲೆ ದಾಳಿಯನ್ನಿಡುವದಕ್ಕೆ ಸಿದ್ಧರಾಗಿದ್ದರು. ಪರಚಕ್ರಗಳ ದಾಳಿಯಿಂದ ಚಾಲುಕ್ಯಸಾಮ್ರಾಜ್ಯವು ಹೇಳಹೆಸರಿಲ್ಲದಂತೆಯಾಗಿ ಹೋಗುವದೋ

ಏನೋ ಎಂಬ ಭಯವು ಸಾಮ್ರಾಜ್ಯದ ಹಿತಚಿಂತಕರನ್ನು ಬಲವಾಗಿ ಬಾಧಿಸತೊಡಗಿತ್ತು. ಮಂಗಳೇಶನು ಶೂರನೂ ಸಾಹಸಿಯೂ ರಾಜ ಕಾರಣ ಧುರಂಧರನೂ ಆಗಿದ್ದರೂ, ಅರಿಬಲವೆಲ್ಲ ಒಬ್ಬೊಳಿಯಾಗಿ ಮುಗಿಬಿದ್ದರೆ, ಸಾಮ್ರಾಜ್ಯದ ಪಾಡು ಹೀಗಾಗದೆಂಬದನ್ನು ಅರಿತವ ನಾಗಿ, ಅದರ ಸ್ಥೈರ್ಯದ ಬಗ್ಗೆ ನಾನಾವಿಧವಾಗಿ ಯೋಚಿಸತೊಡ ಗಿದ್ದನು.

ಪುಲಿಕೇಶಿಯ ತಾಯಿಯು ಸೇಂದ್ರಕ ಅರಸುಮನೆತನದ ಶ್ರೀ ವಲ್ಲಭಸೇನಾನಂದನ ಭಗಿನಿಯು ಅವಳು ಕೀರ್ತಿವರ್ಮನಿರುವಾಗಲೇ ಮರಣಹೊಂದಿದ್ದಳು ರಾಜಮಾತೆಯಾದ ದುರ್ಲಭದೇವಿಯು-ಕೀರ್ತಿವರ್ಮನ ತಾಯಿಯು-ಚಿಕ್ಕಂದಿನಿಂದ ಪರದೇಶಿಗಳಾದ ಕೀರ್ತಿ ವರ್ಮನ ಮೂವರು ಪುತ್ರರನ್ನೂ ಸಲಹುತ್ತ ಬಂದಿದ್ದಳು. ರಾಜ ಪುತ್ರರೀಗ ತಂದೆಯನ್ನು ಸಹ ಕಳೆದುಕೊಂಡದ್ದರಿಂದ ವೃದ್ಧಾಪ್ಯದಲ್ಲಿ ಅವಳಿಗೆ ಪರಮಾವಧಿ ವ್ಯಸನವಾಗಿತ್ತು. ಮಂಗಳೇಶನಾದರೂ ತನ್ನ ಪುತ್ರನಾದ ಇಂದ್ರವರ್ಮನಂತೆ ಆ ಮಾತಾ-ಪಿತೃಹೀನ ರಾಜಪುತ್ರ ರನ್ನು ರಕ್ಷಿಸುತ್ತಿದ್ದನು.

ಸತ್ಯವರ್ಮನು ಚಾಲುಕ್ಯಸಾಮ್ರಾಜ್ಯದ ಮುಖ್ಯಮಂತ್ರಿಯು. ಇವನು ಮುಂಜಾಗ್ರತೆಯುಳ್ಳವನೂ, ಚಾಣಾಕ್ಷನೂ ಇದ್ದು, ಕೀರ್ತಿ ವರ್ಮನ ಕಾಲದಿಂದ ಅನುಪಮ ಸ್ವಾಮಿನಿಷ್ಠೆಯಿಂದ ಕಾರ್ಯಭಾರ ವನ್ನು ನಡೆಯಿಸಿದವನಾಗಿದ್ದನು. ಚಾಲುಕ್ಯಸಾಮ್ರಾಜ್ಯದ ಏಳ್ಗೆ ಗಾಗಿ ಕುದಿಯುತ್ತಿರುವ ಜನರಲ್ಲಿ ಇವನೇ ಅಗ್ರಗಣ್ಯನು. ಮಂಗಳೇ ಶನು ಪ್ರೀತಿಯೊಂದ ಕಾರ್ಯಕರ್ತನಾಗಿ, ವಿಶ್ವಾಸಿಯೂ ನಿಸ್ಪೃಹವೃತ್ತಿ ಯುವನೂ ಆದ ಸತ್ಯವರ್ಮನ ಅಭಿಪ್ರಾಯವನ್ನು ಕೇಳುತ್ತಿದ್ದನು.

ಮಂಗಳೇಶನು ಅಷ್ಟೊಂದು ಸರಳಸ್ವಭಾವದವನಲ್ಲೆಂಬದನ್ನು ಸತ್ಯವರ್ಮನು ಅರಿತಿದ್ದನು. ಲಾಂಗೂಲ ಚಾಲಕರೂ, ಮುಖ ಸ್ತುತಿಪಾಠಕರೂ, ಗೃಹಭೇದಿಗಳೂ ಆದ ಸ್ವಾರ್ಥಿಗಳ ಬಲೆಯಲ್ಲಿ ಸಿಗುವಂಥವನೂ, ಪ್ರಸಂಗವೊದಗಿದರೆ ಜಡಸ್ವಾರ್ಥದ ಕಡೆಗೆ ಮಹ

ಪೇಶಿಸುವವನೂ, ಮನಸ್ಸಿಗೆ ಬಂದರೆ ಎಂತಹ ನೀಚಕೃತ್ಯಗಳನ್ನಾ ದರೂ ಮಾಡುವದಕ್ಕೆ ಹೇಸದವನೂ ಆದ ಅವನಲ್ಲಿ ಸತ್ಯವರ್ಮನು ಕಾಳಸರ್ಪದಲ್ಲಿಡುವಷ್ಟು ನಂಬಿಗೆಯನ್ನು ಮಾತ್ರ ಇಟ್ಟಿದ್ದನು. ರಾಜ್ಯದ ದುಷ್ಟಲಾಲಸೆಗೊಳಗಾಗಿ ಮಂಗಳೇಶನು ಪುಲಿಕೇಶಿಗೆ ಕೇಡನ್ನು ಬಗೆಯುವದಕ್ಕೆ ಹಿಮ್ಮೆಟ್ಟಿಲ್ಲವೆಂದಾದರೂ ಸಿದ್ಧನಾಗದಿರ ನೆಂಬ ಭವಿಷ್ಯದ ಛಾಯಾಚಿತ್ರವು ಅವನ ನೇತ್ರಪಟಲದಲ್ಲಿ ಮಸ- ಮಸಕಾಗಿ ಮೂಡಿತ್ತು. ಮಂಗಳೇಶನಿಂದ ಇನ್ನೂ ಅಂತಹ ಪ್ರಮಾ ದಗಳೇನೂ ಘಟಿಸದಿದ್ದರೂ ಚಾಣಾಕ್ಷನಾದ ಸತ್ಯವರ್ಮನು ತ್ರಿಕಾಲ ಜ್ಞಾನಿಯಂತೆ ಭವಿಷ್ಯಕಾಲದ ಭೀಷಣವಾದ ಛಾಯಾಚಿತ್ರವೊಂ ದನ್ನು ಕಲ್ಪಿಸಿಕೊಂಡು ಭಯಭೀತನಾಗಿದ್ದನು. ಅಂತೆಯೇ ಅವನು ಮಂಗಳೇಶನನ್ನು ವಚನಬದ್ಧನನ್ನಾಗಿ ಮಾಡಿಕೊಳ್ಳಬೇಕೆಂಬ ಮನೀಷೆಯಿಂದ ರಾಜಮಾತೆಯಾದ ದುರ್ಲಭದೇವಿಯ ಬಳಿಯಲ್ಲಿ ತನ್ನ ಮನಸ್ಸಿನಲ್ಲಿ ಹುಟ್ಟಿದ ಸಂಶಯವನ್ನು ಪರ್ಯಾಯದಿಂದ ಸೂಚಿಸಿದ್ದನು.

ದುರ್ಲಭದೇವಿಯು ರಾಜಕಾರಣಪಟುವಾದ ಮೊದಲನೆಯ ಪುಲಿಕೇಶಿಯ ಪತ್ನಿಯು ಪತಿಯ ಆಳಿಕೆಯಿಂದ ಇದುವರೆಗೆ ಕಾರ್ಯಭಾರದಲ್ಲಿ ಮನಸ್ಸು ತೊಡಗಿಸಿದಂತಹಳು; ಹೀಗಿದ್ದ ಮೇಲೆ ಮಂತ್ರಿಯ ಮಂತ್ರಾಲೋಚನದ ಮಂತ್ರದ ಪಡಿಕಟ್ಟು ಅವಳ ಮನ ಸ್ಸಿಗೆ ಹೊಳೆಯದಿರಲಿಲ್ಲ. ಅವಳಾದರೂ ಸತ್ಯವರ್ಮನ ಊಹೆಯನ್ನು ವ್ಯರ್ಥವಾಗಿ ಭಾವಿಸಲಿಲ್ಲ. ಪುಲಿಕೇಶಿಯ ಅರ್ಥಾತ್ ಚಾಲುಕ್ಯ ಸಾಮ್ರಾಜ್ಯದ ಭವಿಷ್ಯಕಾಲದ ಹಿತಚಿಂತನೆಯು ಅವಳಿಗೆ ಮುಖ್ಯ ಕರ್ತವ್ಯವೆನಿಸಿದ್ದರಿಂದ, ಅವಳು ಅದರ ಬಗ್ಗೆ ಮಾತನಾಡುವದಕ್ಕಾಗಿ ಮಲಮಗನಾದ ಮಂಗಳೇಶನನ್ನು ಬರಮಾಡಿಕೊಂಡಿದ್ದಳು.

ಮಂಗಳೇಶನಾದರೂ ದುರ್ಲಭದೇವಿಯಲ್ಲಿ ಅತ್ಯಂತ ಭಕ್ತಿ ಯುಳ್ಳವನಾಗಿದ್ದನು. ಮಲತಾಯಿ-ಮಲಮಕ್ಕಳೆನ್ನುವದರ ಕಲ್ಪ ನೆಯೂ ಅವರಲ್ಲಿರಲಿಲ್ಲ. ಪ್ರತಿಯೊಂದು ಕಾರ್ಯದಲ್ಲಿ ಸತ್ಯವರ್ಮನ

ಮತವನ್ನು ಕೇಳುವಂತೆ, ಮಲತಾಯಿಯ ಮಾತನ್ನಾದರೂ ಮಂಗಳೇಶನು ಕೇಳುತ್ತಿದ್ದನು; ಹಾಗು ಅವಳ ಆಜ್ಞೆಯನ್ನು ಎಂದೂ ಉಲ್ಲಂಘಿಸುತ್ತಿರಲಿಲ್ಲ.

"ಮಂಗಳೇಶಾ, ಚಾಲುಕ್ಯಸಾಮ್ರಾಜ್ಯದ ಚಿರಕಾಲದ ಹಿತಕ್ಕಾಗಿ ಎರಡು ಮಾತುಗಳನ್ನು ಹೇಳಬೇಕೆಂದು ನಿನ್ನನ್ನು ಕರೆಯಿಸಿದೆನು." ಹೀಗೆ ರಾಜಮಾತೆಯಾದ ದುರ್ಲಭದೇವಿಯು ನುಡಿದು, ಮಗನ ಮುಖದಿಂದ ಉತ್ತರವೇನು ಹೊರಡುವದೆಂಬದನ್ನು ನಿರೀಕ್ಷಿಸುತ್ತ ಕುಳಿತಳು.

ತಾಯಿಯ ಮಾತಿನ ಗೂಢವು ಮಂಗಳೇಶನಿಗೆ ತಿಳಿಯಲಿಲ್ಲ. ಅವನು ವಿಚಾರದಲ್ಲಿ ಮುಳುಗಿದನು. ತನ್ನಿಂದ ಏನಾದರೂ ಪ್ರಮಾದವು ಘಟಿಸಿರಬಹುದೇನೆಂದು ಅವನು ನಿನ್ನೆ-ಮೊನ್ನಿನ ಸಂಗತಿಗಳನ್ನು ನೆನಪಿಗೆ ತಂದುಕೊಳ್ಳತೊಡಗಿದನು. ಕಡೆಗೆ ಅವನಿಗೆ ಏನೂ ಹೊಳಯದಾಗಲು, ಉತ್ಕಂಠೆಯಿಂದ:—

"ಅಮ್ಮಾ, ಚಾಲುಕ್ಯಸಾಮ್ರಾಜ್ಯದ ಹಿತವೆಂದರೇನೇ ನನ್ನ ಹಿತವು; ಬಾಲವೀರ ಭಾವೀ ಸಮ್ರಾಟ ಪುಲಿಕೇಶಿಯ ಹಿತವು. ತಾವು ನನಗೆ ಸೂಚಿಸತಕ್ಕದ್ದನ್ನು ಅವಶ್ಯವಾಗಿ ಸೂಚಿಸಿರಿ. ರಾಜಕಾರಣದಲ್ಲಿ ನನ್ನಿಂದ ದೋಷಗಳೇನಾದರೂ ಸಂಭವಿಸಿದ್ದರೆ ತಿಳಿಸಿರಿ."

ಮಂಗಳೇಶನ ಮಾತುಗಳನ್ನು ಕೇಳಿ ದುರ್ಲಭದೇವಿಯು ಕ್ಷಣಹೊತ್ತು ವಿಚಾರಿಸುತ್ತ ಕುಳಿತಳು. ತನ್ನ ಮನಸ್ಸಿನಲ್ಲಿಯ ವಿಚಾರಗಳನ್ನು ಅವನೆದುರಿನಲ್ಲಿ ಇಡುವದಕ್ಕೆ ಅವಳು ಹಿಂದೆ-ಮುಂದೆ ನೋಡತೊಡಗಿದಳು. ಅವಳ ಈ ಅನುಮಾನದ ಇಂಗಿತವು ಚಾಣಾಕ್ಷನಾದ ಸತ್ಯವರ್ಮನಿಗೆ ತಿಳಿಯದಿರಲಿಲ್ಲ.

"ಮಹಾರಾಣಿಯವರೇ, ನಿಸ್ಪೃಹವೃತ್ತಿಯಿಂದ ತಮ್ಮ ಮನೋದಯವನ್ನು ತಿಳಿಸುವದಕ್ಕೆ ಅನುಮಾನ ಪಡಬಾರದು. ಯಾವದೊಂದು ಉಪದೇಶವು ಮೊದಲು ನಿಷ್ಠುರವಾಗಿ ತೋರಿದರೂ ಅದರ ಪರ್ಯವಸಾನವು ಸೌಖ್ಯದಲ್ಲಾಗುವದೆಂದು ನನ್ನ ಅನುಭವಕ್ಕೆ

ಬಂದಿದೆ"ಂದು ಸತ್ಯವರ್ಮನು ನುಡಿದನು.

"ಮಂಗಳೇಶಾ, ನಿನ್ನ ಅಣ್ಣನ ಮಕ್ಕಳು ತಾಯಿ-ತಂದೆಗಳನ್ನು ಕಳಕೊಂಡು ನಿರಾಧಾರಿಗಳಾಗಿರುವರು. ಅವರ ಹಿತಚಿಂತನೆಯ ಯಾವತ್ತು ಭಾರವು ನಿನ್ನನ್ನೇ ಅವಲಂಬಿಸಿರುವದು. ಆಯುಷ್ಯದ ಅಂತ್ಯ ಮರ್ಯಾದೆಗೆ ತಲುಪಿದ ನಾನು, ಇನ್ನು ಬಹಳ ದಿನವಿರುವ ಆಶೆಯಿಲ್ಲ. ಇಂದ್ರವರ್ಮನು ನಿನಗೆ ಹೇಗೆ ಮಗನೋ, ಅದರಂತೆ ಕೀರ್ತಿವರ್ಮನ ಸುತರಾದರೂ ನಿನ್ನ ಮಕ್ಕಳೇ ಇರುವರು. ನೀನು ಅವರನ್ನು ಭೇದಭಾವವಿಲ್ಲದೆ ರಕ್ಷಿಸಬೇಕು; ಹಾಗು ಪುಲಿಕೇಶಿಯು ಸಿಂಹಾಸನದ ಬಾಧ್ಯಸ್ಥನಿರುವನು; ಅವನಿಗೆ ಪಟ್ಟಾಭಿಷೇಕ ಮಾಡಿಸಿ, ಕೇವಲ ಸಾಮ್ರಾಜ್ಯದ ಪ್ರತಿನಿಧಿಯೆಂದು ನೀನು ರಾಜ್ಯಭಾರವನ್ನು ವಹಿಸು. ಬಾಲ ಸಾಮ್ರಾಟನು ಪ್ರಾಪ್ತವಯಸ್ಕನಾದ ಕೂಡಲೆ ಎಲ್ಲ ರಾಜ್ಯಸೂತ್ರಗಳನ್ನು ನಿರ್ಬಾಧಕವಾಗಿ ಅವನ ಕೈಯಲ್ಲಿ ಕೊಟ್ಟು ಅಜನ್ಮವಾಗಿ ಸಾಮ್ರಾಜ್ಯದ ಏಳ್ಗೆಯ ಬಗ್ಗೆ ಯತ್ನಿಸು" ಎಂದು ದುರ್ಲಭದೇವಿಯು ನುಡಿದು, ಅವನ ಅಭಿಪ್ರಾಯವೇನು ಹೊರ ಬೀಳುವದೆಂಬದನ್ನು ನಿರೀಕ್ಷಿಸತೊಡಗಿದಳು.

"ಅಮ್ಮಾ, ತಾವು ಇದನ್ನೇನು ಹೊಸದಾಗಿ ಹೇಳುವಿರಿ? ಪುಲಿ ಕೇಶಿಯು ಪಟ್ಟಬಾಧ್ಯನೇ ಅಹುದು. ಅವನಿಗೆ ಬೇಗನೆ ಪಟ್ಟಾಭಿ ಷೇಕ ಮಾಡಿಸಬೇಕೆಂದು ಸಂಕೇತ ಮಾಡಿರುವೆನು. ನಾನು ಕೇವಲ ಸಾಮ್ರಾಜ್ಯದ ಸೇವಕ ಮಂಡಲದಲ್ಲಿಯ ಒಬ್ಬನಿರುವೆನು. ಅವನು ವಯಸ್ಸಿಗೆ ಬಂದ ಕೂಡಲೆ ಅವನ ಸಾಮ್ರಾಜ್ಯಾಧಿಕಾರವನ್ನು ಅವ ನಿಗೆ ಕೊಡುವದಕ್ಕೆ ಯಾವ ಆತಂಕವಿರುವದು? ಪರದೇಶಿಗಳಾದ ಕೀರ್ತಿವರ್ಮನ ಮಕ್ಕಳನ್ನು ನನ್ನ ಪುತ್ರನಾದ ಇಂದ್ರವರ್ಮನಿಗಿಂ ತಲೂ ಹೆಚ್ಚಾದ ಪ್ರೇಮದಿಂದ ಕಾಪಾಡುವೆನು. ನೀವು ಯಾವ ಬಗೆಯ ಚಿಂತೆಯನ್ನೂ ಮಾಡಬೇಡಿರಿ" ಎಂದು ಮಂಗಳೇಶನು ನಿರ್ಮಲಹೃದಯದಿಂದ ಮಾತನಾಡಲು, ದುರ್ಲಭದೇವಿಗೆ ಹಿಡಿಸಲಾ ರದಷ್ಟು ಸಂತೋಷವಾಯಿತು. ಆಗ ಅವಳು ಆನಂದಭರದಿಂದ:—

"ನಿನ್ನ ನಿರ್ಮಲಾಂತಃಕರಣದ ಪಡಿಕಟ್ಟನ್ನು ನಾನು ಅರಿತವಳಾಗಿದ್ದರೂ ಪುಲಿಕೇಶಿಯ ಮೇಲಿನ ಅನುರಾಗದಿಂದ ಮಾತಾಡಬೇಕಾಯಿತು. ಯಾವ ಕಾರಣದಿಂದಲಾದರೂ ನಿನ್ನ ನಿರ್ಮಲವಾದ ಆಚರಣೆಯಲ್ಲಿ ವ್ಯತ್ಯಯವಾಗಬಾರದೆಂಬು ನನ್ನ ಬಯಕೆಯಿದೆ"

ದುರ್ಲಭದೇವಿಯು ಹೀಗೆ ನುಡಿದ ಕೂಡಲೆ ಸತ್ಯವರ್ಮನಿಗೆ ಮಾತಾಡುವದಕ್ಕೆ ಅನುವು ದೊರೆಯಿತು. ಮಂಗಳೇಶನ ಸ್ವಭಾವ ವೈಚಿತ್ರ್ಯವನ್ನು ಅವನು ಪೂರಾ ಬಲ್ಲವನಾದ್ದರಿಂದ, ಮೊದಲೇ ಅವನನ್ನು ವಚನಬದ್ಧನನ್ನಾಗಿ ಮಾಡುವದು ಲೇಸೆಂದು ಅವನು ಭಾವಿಸಿದನು. ಆಗ ಅವನು ಅಧಿಕಾರಕ್ಕನುಗುಣವಾದ ವಾಣಿಯಿಂದ:-

"ಮಹಾರಾಜರೇ, ರಾಜ್ಯಲಕ್ಷ್ಮಿಯು ಅತ್ಯಂತ ಮೋಹಕಳು. ಎಂತಹ ಸದ್ಗುಣಿಯಾದರೂ ಅವಳ ಮೋಹಪಾಶಕ್ಕೊಳಗಾಗಿ ಜಾರುತ್ತಾನೆ. ಅವಳ ಪ್ರಾಪ್ತಿಗಾಗಿ ಎಂತಹ ಹೊಲ್ಲದ ಕಾರ್ಯಗಳನ್ನಾದರೂ ಮನುಷ್ಯನು ಮಾಡುವನು. ಕೈಯೊಳಗಿರುವ ರಾಜವೈಭವವನ್ನು ತ್ಯಜಿಸುವದೆಂದರೆ ಮರಣಪ್ರಾಯವಾದ ದುಃಖವಾದಂತಾಗುತ್ತದೆ. ಆಗ ಮನುಷ್ಯನು ವಿವೇಕಶೂನ್ಯನಾಗುವನು; ಅವನಿಂದ ಅನೇಕ ಪ್ರಕಾರದ ರಾಕ್ಷಸೀಕೃತಿಗಳು ಸಂಘಟಿಸುತ್ತವೆ. ಬಂಧುಭಾವನೆಯು ನಶಿಸುತ್ತದೆ. ಸೌಜನ್ಯವು ಹಾಳಾಗುತ್ತದೆ. ಅಧಿಕಾರದಿಂದ ಪ್ರಾಪ್ತವಾದ ರಾಜ್ಯದ ಸ್ವಾಮಿಯು ಸ್ವಾಭಾವಿಕವಾಗಿ ಪ್ರಜಾನುರಾಗವುಳ್ಳವನಿರುವನು; ಆದರೆ ಅನಧಿಕಾರದ-ರಾಜ್ಯದ ಸ್ವಾಮಿತ್ವವನ್ನು ಏನಕೇನ ಪ್ರಕಾರೇಣ ಗಳಿಸಿದ-ಆಳರಸರ ದಬ್ಬಾಳಿಕೆಯು ಅಸಹ್ಯವಿರುತ್ತದೆ. ಅಂಥವರು ತಮ್ಮ ಸ್ವಾಮಿತ್ವವನ್ನು ಚಿರಸ್ಥಾಯಿಯಾಗಿ ಮಾಡಿಕೊಂಡು, ರಾಜ್ಯಾಧಿಕಾರಿಯನ್ನೂ, ಪ್ರಜೆಗಳನ್ನೂ ಪಾರತಂತ್ರ್ಯಪಂಕದಲ್ಲಿ ಕೆಡಹುತ್ತಾರೆ. ರಾಜ್ಯಲಕ್ಷ್ಮಿಯಲ್ಲಿ ಅಂತಹದೊಂದು ಗುಣವು ವಾಸವಾದುದರಿಂದಲೇ ಮಹಾರಾಜ್ಞಿಯವರು ಆಕ್ಷೇಪಣೆಯನ್ನು ತೆಗೆದಿರುವರು. ಮಹಾರಾಜರೇ, ಸುಜ್ಞರಾದ ತಮಗೆ ಹೆಚ್ಚು ಹೇಳಬೇಕಾದುದೇನು? ಅನ್ಯರ ಜನ್ಮಸಿದ್ಧವಾದ

ಅಧಿಕಾರಂಗಳನ್ನು ರಾಕ್ಷಸೀಬಲದಿಂದ ಅಪಹರಿಸಿ, ನೀಚ ಸ್ವಾರ್ಥ ಲೋಲುಪರಾದ ಜನರು ಅವರ ಕ್ಷೋಭಾಗ್ನಿಗೆ ಆಹುತಿಯಾಗುವದ ರಲ್ಲಿ ಸಂದೇಹವಿಲ್ಲ ಈಗಿನ ಅಂತಃಕರಣಭಾವವು ಕಡೆತನಕ ಶಾಶ್ವ ತವಾಗಿ ಉಳಿಯಲಿಕ್ಕಿಲ್ಲವೆಂಬದಕ್ಕೆ ಅನೇಕ ಸಬಲವಾದ ಕಾರಣ ಗಳಿದ್ದದರಿಂದ, ಮುಂದೊದಗಬಹುದಾದ ಅನಿಷ್ಟದ ವಿಷಯಕ್ಕೆ ತಾವೂ ನಾವೂ ಕೂಡಿಯೇ ಜಾಗ್ರತೆಯಿಂದಿರುವದು ಹಿತು, ಭಿನ್ನ ಶರೀರ, ಭಿನ್ನ ಜೀವಗಳಲ್ಲಿ ಅಂತಹ ಸಮತಾಬುದ್ಧಿಯು ಪ್ರಾದುರ್ಭ ವಿಸುವದು ದುಷ್ಕರವು. ನೀವು ಪ್ರೇಮದ ಹೃದಯದವರಾಗಿದ್ದರೂ, ನಿಮ್ಮ ನಿರ್ಮಲ ಹೃದಯವನ್ನು ಕಲುಷಿತ ಮಾಡುವದಕ್ಕೆ ಅನೇಕ ಪ್ರಸಂಗಗಳು ಒದಗದಿರವೆಂದು ನಾನು ಅನ್ನಲಾರೆನು. ಎಂತಹ ಪ್ರಸಂಗದಲ್ಲಾದರೂ ಕುಮಾರ ಪುಲಿಕೇಶಿ ಮಹಾರಾಜರ ಹಾಗು ಚಾಲುಕ್ಯ ಸಾಮ್ರಾಜ್ಯದ ಹಿತಚಿಂತನೆಯ ಕಾರ್ಯದಲ್ಲಿ ವ್ಯತ್ಯಾಸ ವಾಗಗೊಡಲಿಕ್ಕಿಲ್ಲೆಂದು ತಮ್ಮಿಂದ ಅಭಯವು ದೊರೆತರೆ ಸಾಕು. ಸ್ವಾಮಿಕಾರ್ಯದಲ್ಲಿ ದೇಹವನ್ನು ಸವಿಸಬೇಕೆನ್ನುವ ನಮ್ಮಂಥ ಸೇವಕರಿಗೆ ಇದಕ್ಕಿಂತ ಹೆಚ್ಚಾಗಿ ಮತ್ತೇನು ಬೇಕು? ಗೃಹಕಲ ಹವು ಕುಟುಂಬದಲ್ಲಿ ತಲೆದೋರುವದು ಸ್ವಾಭಾವಿಕವು. ಅದನ್ನು ಹಿಂದುಳಿಸಿ ಕರ್ತವ್ಯಪ್ರಭಾವವನ್ನು ತೋರಿಸುವ ಮಹಾತ್ಮರು ಅತಿ ವಿರಲ್ಲ. ಹಾಗೆ ಮಾಡದಿದ್ದರೆ ಅದರಿಂದ ಸಾಮ್ರಾಜ್ಯಕ್ಕೆ ಸಾಮ್ರಾ ಜ್ಯವೇ ಬುಡಮೇಲಾಗಿ, ದೇಶವು ಪರಚಕ್ರದ ದಾಸ್ಯದಲ್ಲಿ ಕೊಳೆಯು ಬೇಕಾಗುವದೆಂಬ ಮಾತನ್ನು ಸಮಂಜಸ ರಾಜಕಾರಣಕರ್ತರಾದ ತಮಗೆ ಹೇಳಬೇಕಾಗಿಲ್ಲ. ಗೃಹಕಲಹಕ್ಕೆ ಆಸ್ಪದ ಕೊಡದೆ ದೇಶ ದೇಳ್ಗೆಗಾಗಿ ಯತ್ನಿಸಿ, ನಿಸ್ವಾರ್ಥಬುದ್ಧಿಯು ಪ್ರತಿಭೆಯಿಂದ ಪ್ರಜಾ ಜನರನ್ನು ಸಂಭ್ರಮಗೊಳಿಸುತ್ತ, ಪುಲಿಕೇಶಿಮಹಾರಾಜರು ಪ್ರಾಪ್ತ ವಯಸ್ಕರಾಗುವ ವರೆಗೆ ರಾಜ್ಯಭಾರವನ್ನು ವಹಿಸಬೇಕೆಂದು ನನ್ನ ಪ್ರಾಮಾಣಿಕ ಅಭಿಪ್ರಾಯವಿರುವದು. ಮಹಾರಾಜ್ಞಿಯವರ ಮಾ- ತಿನ ಆಶಯವಾದರೂ ಹೀಗೆಯೇ ಇರುವದು.''

ಸತ್ಯವಾದಿಯಾದ ಸತ್ಯಶರ್ಮನ ಮಾತುಗಳು ಮಂಗಳೇಶನಿಗೆ ಯೋಗ್ಯವಾಗಿ ತೋರಿ, ಅವನ ಧೂರ್ತತನಕ್ಕೆ ತಲೆದೂಗಿದನು. ಪ್ರಸಂಗವಶಾತ್ ತನ್ನಿಂದಾಗಲಿ, ತನ್ನ ಪತ್ನೀ-ಪುತ್ರರಿಂದಾಗಲಿ ಪ್ರಮಾದವು ಘಟಿಸಿ, ಚಾಲುಕ್ಯ ಸಾಮ್ರಾಜ್ಯದ ಹಾನಿಯಾದೀತೆಂಬ ಬೆದರಿಕೆಯಿಂದ ಅವನೂ ದುರ್ಲಭದೇವಿಯೂ ಹೀಗೆ ಬೋಧಿಸಿದ ರೆಂದು ಅವನ ಮನವರಿಕೆಯಾಯಿತು ಆಗ ಅವರಲ್ಲಿ ಜನಿಸಿದ ಸಂಶ ಯದ ನಿವಾರಣೆಗಾಗಿ ನಿಶ್ಚಯಾತ್ಮಕ ಸ್ವರದಿಂದ:—

"ಮಂತ್ರಿಗಳೇ, ಮಾತೆಯೇ, ಈ ಸಾಮ್ರಾಜ್ಯಕ್ಕೆ ಒಡೆಯನು ಪುಲಿಕೇಶಿಯು. ಅವನು ಪ್ರಬುದ್ಧನಾದೊಡನೆಯೆ ನಿರಾತಂಕವಾಗಿ ಅವನ ರಾಜ್ಯವನ್ನು ಅವನಿಗೊಪ್ಪಿಸುವೆನು ಕೀರ್ತಿವರ್ಮಪುತ್ರ ರನ್ನು ಇಂದ್ರವರ್ಮನಿಗಿಂತ ಹೆಚ್ಚಾಗಿ ನೋಡಿಕೊಂಡು ಹೋಗು ವೆನು. ಆಮರಣವಾಗಿ ನಾನು ಚಾಲುಕ್ಯ ಸಾಮ್ರಾಜ್ಯದ ಹಿತಚಿಂ ತನೆಯಲ್ಲಿಯೇ ಕಾಲಕಳೆಯುವೆನು. ಇದೇ ನನ್ನ ದೃಢವಾದ ಪ್ರತಿ ಜ್ಞೆಯು!" ಎಂದು ಮಂಗಳೇಶನು ಉದ್ಗಾರ ತೆಗೆದನು.

---

## ದಂಡಯಾತ್ರೆ.



ವಾತಾಪಿಪುರದ ಚಾಲುಕ್ಯ ಸಾಮ್ರಾಜ್ಯ ಸಿಂಹಾಸನದಲ್ಲಿ ಯುವ ರಾಜನಾದ ಪುಲಿಕೇಶಿಯು ವಿರಾಜಮಾನನಾಗಿದ್ದನು. ಮಂಗಳೇ ಶನು ಅವನ ಪ್ರತಿನಿಧಿಯಾಗಿ ಚತುರರಾದ ಮಂತ್ರಿ-ಸೇನಾಪತಿಗಳ ಸಹಾಯದಿಂದ ರಾಜ್ಯಶಕಟವನ್ನು ಸಾಗಿಸಿದ್ದನು. ಕೀರ್ತಿವರ್ಮನ ಮರಣದ ನಂತರ ಅಲ್ಲಲ್ಲಿ ದಂಗೆಗಳೆದ್ದಿದ್ದವು; ಎಷ್ಟೋ ಮಾಂಡಲಿಕ ಅರಸರು ಕಪ್ಪ-ಕಾಣಿಕೆಗಳನ್ನು ಕೊಟ್ಟಿದ್ದಿಲ್ಲ. ಅವನು ತನ್ನ ವೀರ ಕನ್ನಡಿಗ ಸೈನಿಕರ ಸಹಾಯದಿಂದ ಎಲ್ಲ ಕಡೆಯಲ್ಲಿ ಶಾಂತತೆಯನ್ನುಂ ಮಾಡಿ, ಮಾಂಡಲಿಕ ಅರಸರಿಂದ ಕಾಣಿಕೆಯನ್ನು ತೆಗೆದುಕೊಂಡನು.

ಚಾಲುಕ್ಯಸಾಮ್ರಾಜ್ಯವು ಕೀರ್ತಿವರ್ಮನಿರುವಾಗಿನಂತೆಯೇ ಅಭ್ಯು ದಯವನ್ನು ಹೊಂದುತ್ತ ನಡೆಯಿತು. ರಣವಿಕ್ರಮ ಮಂಗಳೇಶ ನಿಗೆ ಸತ್ಯವರ್ಮನಂತಹ ಮುತ್ಸದ್ದಿತನದ ಸ್ವಾಮಿನಿಷ್ಠ ಮಂತ್ರಿಗಳ ಸಹಾಯವೂ, ಪ್ರತಾಪವರ್ಮನಂತಹ ವೀರಾಧಿವೀರ ಸೇನಾನಾಯ ಕನ ನೆರವೂ, ದೇಹದಲ್ಲಿ ಪ್ರಾಣವಿರುವ ವರೆಗೆ ಹೋರಾಡುವಂತಹ ಕೆಚ್ಚೆದೆಯ ಕನ್ನಡ ಸೈನಿಕರ ಅನುಕೂಲವೂ ಇದ್ದ ಮೇಲೆ ಸಾಮ್ರಾ ಜ್ಯದ ಅಭ್ಯುದಯವು ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಆಗದೇನು ಮಾಡೀತು?

ಮಂಗಳೇಶನು ತಾನು ಪ್ರತಿಜ್ಞೆ ಮಾಡಿದಂತೆ ಪುಲಿಕೇಶಿ ಯನ್ನೂ, ಅವನ ಇಬ್ಬರು ತಮ್ಮಂದಿರನ್ನೂ ಚನ್ನಾಗಿ ರಕ್ಷಿಸುತ್ತಿ ದ್ದನು. ಅವನು ಎಷ್ಟೇ ಜಂಬದವನಿದ್ದರೂ ತಾನೇ ಚಕ್ರವರ್ತಿ ಯೆಂದು ಸಾರುವಷ್ಟು ಧೈರ್ಯದವನಿರಲಿಲ್ಲ. ಪಟ್ಟದ ಬಾಧ್ಯಸ್ಥನು ಪುಲಿಕೇಶಿಯಾದುದರಿಂದ, ಅವನು ಕೇವಲ ಪ್ರತಿನಿಧಿಯಂತೆ ರಾಜ ಕಾರಣವನ್ನು ಮಾಡುತ್ತಿದ್ದನು ಅವನ ಈ ಸದ್ವರ್ತನದಿಂದ ಚಾಲುಕ್ಯ ಸಾಮ್ರಾಜ್ಯದ ಮಂತ್ರಿ-ಸೇನಾನಾಯಕರಿಗೂ, ಸಾಮ್ರಾಜ್ಯದೊಳ ಗಿನ ಪ್ರಜೆಗಳಿಗೂ ಹಿರಿತಾಗಿ ಬೇಕಾದನು. ಅವನ ಈ ವರ್ತನ ವನ್ನು ನೋಡಿ ದುರ್ಲಭದೇವಿಯು ಪುತ್ರಶೋಕವನ್ನು ಮರೆತಳು. ಅವಳು ಮಂಗಳೇಶನಲ್ಲಿ ಪೂರ್ಣವಿಶ್ವಾಸವುಳ್ಳವಳಾದುದರಿಂದ, ಪುಲಿ ಕೇಶಿಯ ವಿಷಯದ ಚಿಂತೆಯನ್ನು ಬಿಟ್ಟಳು.

ಸಾಮ್ರಾಜ್ಯದಲ್ಲಿ ಶಾಂತಿಯುಂಟಾದ ಬಳಿಕ, ಉತ್ತರಾಪಥ ವನ್ನು ಗೆಲ್ಲಬೇಕೆಂಬ ಬುದ್ಧಿಯು ಮಹತ್ವಾಕಾಂಕ್ಷೆಯುಳ್ಳ ಮಂಗ ಳೇಶನಲ್ಲಿ ಹುಟ್ಟಿತು. ಭರತಖಂಡದಲ್ಲಿ ಚಾಲುಕ್ಯರ ಏಕಛತ್ರಾಧಿ ಪತ್ಯವು ಸ್ಥಾಪಿಸಲ್ಪಡಬೇಕೆಂದು ಕೀರ್ತಿವರ್ಮನು ಹೋರಾಡಿದಂತೆ ತಾನಾದರೂ ಹೋರಾಡಬೇಕೆಂದು ಅವನ ಇಚ್ಛೆಯಿತ್ತು. ಮಗಧ, ಪಾಂಡ್ಯ, ಚೋಳ ಮೊದಲಾದ ರಾಜ್ಯಗಳನ್ನು ಜಯಿಸಿ, ಅವರನ್ನು ಮಾಂಡಲಿಕರನ್ನಾಗಿ ಮಾಡಿಕೊಳ್ಳುವಂತಹ ಶಕ್ತಿಯು ಚಾಲುಕ್ಯ

ಸಾಮ್ರಾಜ್ಯಕ್ಕಿರುವಾಗ ಸುಮ್ಮನೆ ನೋಡಿ ಬಿಡಿಯುತ್ತ ಕುಳಿತುಕೊಳ್ಳು ವದು ಆ ದೀರ್ಘಸಾಹಸಿಗೆ ಸರಿದೋರಲಿಲ್ಲ. ದಂಡಯಾತ್ರೆಯನ್ನು ಮಾಡಬೇಕೆಂಬ ನಿಶ್ಚಯದಿಂದ ಆ ಕೆಚ್ಚೆದೆಯ ವೀರನು ಇಂದು ಓಲಗವನ್ನು ಕೂಡಿಸಿದ್ದನು.

ವಾತಾಪಿಪುರದ ಓಲಗದಲ್ಲಿ ರತ್ನಖಚಿತ ಸಿಂಹಾಸನದ ಮೇಲೆ ಹದಿನಾರು ವರ್ಷದ ಸಮ್ರಾಟನಾದ ಪುಲಿಕೇಶಿಯು ವಿರಾಜಮಾನನಾಗಿದ್ದನು ಬದಿಯಲ್ಲಿಯೇ ಒಂದು ಸುಂದರವಾದ ರತ್ನಕೆಚ್ಚಿದ ಸುವರ್ಣಾಸನದಲ್ಲಿ ಸಾರ್ವಭೌಮ ಪ್ರತಿನಿಧಿಯಾದ ಮಂಗಳೇಶನು ಮಂಡಿಸಿದ್ದನು ಮಂತ್ರಿ-ಸೇನಾಪತಿಗಳೂ, ಸರದಾರ ಸುಭೇದಾರರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡಿದ್ದರು. ಆಗ ಮಂಗಳೇಶನು ಸಭಿಕರನ್ನುದ್ದೇಶಿಸಿ:—

"ಮಂತ್ರಿ-ಸೇನಾನಾಯಕರೇ, ಸಾಮ್ರಾಜ್ಯದ ಮಾನ್ಯಪ್ರಜೆಗಳೇ, ಕೀರ್ತಿವರ್ಮ ಸಾರ್ವಭೌಮರು ಮಡಿದ ಮೇಲೆ, ದೇಶದಲ್ಲುಂಟಾದ ಅವ್ಯವಸ್ಥೆಯನ್ನು ಇಲ್ಲದಂತೆ ಮಾಡಿ ಎಲ್ಲೆಡೆಯಲ್ಲಿಯೂ ಶಾಂತಿಯನ್ನು ಪ್ರಸ್ಥಾಪಿಸಿದೆನು ಸತ್ಯವರ್ಮನಂತಹ ಮಂತ್ರಿಗಳೂ, ಪ್ರತಾಪವರ್ಮ-ಶಿವದೇವರಂತಹ ಸೇನಾನಾಯಕರೂ ಸಾಮ್ರಾಜ್ಯದ ಆಧಾರಸ್ತಂಭರಾಗಿರುವಾಗ ಎಂಥ ಅಸಾಧ್ಯ ಕಾರ್ಯಗಳನ್ನಾದರೂ ಸಾಧಿಸಬಹುದು ಭರತಖಂಡವು ಚಾಲುಕ್ಯರ ಏಕಛತ್ರದ ಕೆಳಗೆ ಮೆರೆಯಬೇಕೆಂದು ಕೀರ್ತಿವರ್ಮರ ಇಚ್ಛೆಯಿದ್ದದ್ದು, ತಮ್ಮೆಲ್ಲರಿಗೆ ವಿದಿತವೇ ಇರುವದು ಮೊದಲನೆಯ ಪುಲಿಕೇಶಿ ಸಾರ್ವಭೌಮರು ಅಶ್ವಮೇಧಯಾಗವನ್ನು ಮಾಡಿದರು. ಜಯಸಿಂಹ, ರಣರಂಗ, ಕೀರ್ತಿವರ್ಮರ ಪರಾಕ್ರಮದ ಕಥೆಗಳಂತೂ ಸರ್ವಶ್ರುತವಿರುತ್ತವೆ ಸದ್ಯದ ಎರಡನೆಯ ಪುಲಿಕೇಶಿ ಮಹಾರಾಜರ ಆಳಿಕೆಯಲ್ಲಿ ನಮ್ಮ ಪೂರ್ವಜರಿಗಿಂತಲೂ ಹೆಚ್ಚಿನ ಶೌರ್ಯ-ಸಾಹಸಗಳು ತೋರಿಸಲ್ಪಟ್ಟು, ದಿಗಂತರ ಕೀರ್ತಿಯನ್ನು ಪಡೆಯಬೇಕಾದರೆ, ಕಾರ್ಯಕರ್ತನಾದ ನನಗೆ ತಮ್ಮ ಬೆಂಬಲವೂ ಸಹಾನುಭೂತಿಯೂ ಬೇಕಾಗುವದು ಚಾಲುಕ್ಯ

ಸಮ್ರಾಟನಲ್ಲಿ ಅಂತಹ ಅದ್ವಿತೀಯ ಸಾಮರ್ಥ್ಯವಿರುವದರಿಂಧಲೇ ರಾಜ್ಯ ಪ್ರತಿನಿಧಿಯಾದ ನನ್ನಲ್ಲಿ ಉತ್ತರಾಪಥದ ಮೇಲೆ ದಂಡೆತ್ತಿ ಹೋಗಬೇಕೆಂಬ ಸದ್ಬುದ್ಧಿಯು ಉದಯಿಸಿರುವದು. ಶಕ್ತಿಸಂಪನ್ನರು ಹೆಚ್ಚು ಹೆಚ್ಚು ಅಭ್ಯುದಯವನ್ನು ಚಿಂತಿಸದೆ, ಹೇಡಿಗಳಂತೆ ಕಣ್ಣು ಮುಚ್ಚಿಕೊಂಡು ಕುಳಿತುಕೊಳ್ಳುವದು ಉಚಿತವಲ್ಲವೆಂಬ ಮಾತನ್ನು ಪ್ರಾಜ್ಞರಾದ ತಮಗೆ ಹೇಳಲಿಕ್ಕೆ ಬೇಡ" ಎಂದು ಮಂಗಳೇಶನು ಭಾಷಣ ಮಾಡಿ, ಮಂತ್ರಿಯಿಂದಲೇ ಈ ವಿಷಯಕ್ಕಾಗಿ ಅಭಿಪ್ರಾಯವು ದೊರೆಯಬೇಕೆಂಬ ಉದ್ದೇಶದಿಂದ ಅವನ ಮುಖವನ್ನು ನೋಡತೊಡಗಿದನು

ಮಂಗಳೇಶನ ಹಲವು ಮಂತ್ರಿಯಾದ ಸತ್ಯವರ್ಮನ ಮನಸ್ಸಿಗೆ ಸರಿದೋರಲಿಲ್ಲ. ಹುಮ್ಮೆಲೇ ಮನಬಂದಂತೆ ಹರಿದಾಡಿದರೆ ಅದರಿಂದ ಸಾಮ್ರಾಜ್ಯಕ್ಕೆ ಹಾನಿ ತಗಲುವದೆಂದು ಅವನು ಭಾವಿಸಿದನು. ತನ್ನ ಸತ್ಯವಾದ ಮತವನ್ನು ವ್ಯಕ್ತಪಡಿಸುವದಕ್ಕೆ ಎಂದೂ ಹಿಂದುಮುಂದು ನೋಡುವಂತಹ ಸ್ವಭಾವದವನಿರದ್ದರಿಂದ ಅವನು ನಿರ್ಭೀತಿಯಿಂದ:—

"ಮಹಾರಾಜರೇ, ಸಾಮ್ರಾಜ್ಯದಲ್ಲಿ ಈಗೀಗ ಶಾಂತತೆಯು ನೆಲೆಗೊಳ್ಳತೊಡಗಿರುವದು; ಮಾಂಡಲೀಕ ಅರಸರು ಮೆತ್ತಗಾಗಿ ಬಹಳ ದಿನಗಳಾಗಿಲ್ಲ ಇಂತಹ ಸಂಧಿಯಲ್ಲಿ ದಂಡಯಾತ್ರೆಯನ್ನು ಮಾಡಿ, ಅನ್ಯದೇಶಗಳನ್ನು ಜಯಿಸುವ ಗೊಂದಲದಲ್ಲಿ ಬೀಳುವದು ನನಗೇಕೋ ಯೋಗ್ಯವೆನಿಸಲೊಲ್ಲದು. ನನಗೆ ನೀವು ಹೇಡಿಯೆನ್ನಿರಿ; ಸಾಮ್ರಾಜ್ಯದ ಅಭ್ಯುದಯ ಕಾರ್ಯದಲ್ಲಿ ಕಂಟಕಕಾರಿಯೆಂದೆನ್ನಿರಿ; ಬೇಕಾದಂತೆ ಹೆಸರಿಟ್ಟರೂ ನನ್ನ ಸರಳವಾದ ಅಭಿಪ್ರಾಯದಲ್ಲಿ ವ್ಯತ್ಯಾಸವಾಗಲಿಕ್ಕಿಲ್ಲ. ಪುಲಿಕೇಶಿ ಸಾರ್ವಭೌಮರು ಇನ್ನೂ ಅಲ್ಪವಯಸ್ಕರಿರುವರು ಅವರು ಪ್ರಾಪ್ತವಯಸ್ಕರಾಗುವ ವರೆಗೆ ಸಧ್ಯದ ಸಾಮ್ರಾಜ್ಯವನ್ನಂತೂ ರಕ್ಷಿಸುತ್ತ ನಡೆಯಿರಿ. ಹೊಸ ಸಂಪಾದನೆಯ ಹವ್ಯಾಸಕ್ಕೆ ಬಿದ್ದು, ಇದ್ದುದನ್ನು ನಾಶಗೊಳಿಸಿಕೊಳ್ಳುವ

ಯತ್ನವೇ ಬೇಡ. ತಮ್ಮ ಪ್ರಯತ್ನಕ್ಕೆ ಹಿಂದುವೇಳೆ ಅಪಯಶ ವೊದಗಿದರೆ, ಆ ಕಲಂಕವು ಸ್ಥಿರವಾಗಿ ತಮ್ಮ ಕೀರ್ತಿತೇಜವನ್ನು ನಾಶಮಾಡುವದು. ಸಾಮ್ರಾಜ್ಯದ ನಿಜಸ್ವಾಮಿಯು ತನ್ನ ಕೈಯಲ್ಲಿ ಸೂತ್ರಗಳನ್ನು ತೆಗೆದುಕೊಂಡ ಮೇಲೆ ಬೇಕಾದಂತಹ ಕಾರ್ಯ ಗಳನ್ನು ಮಾಡಲಿ; ಸದ್ಯಕ್ಕೆ ತಟಸ್ಥವೃತ್ತಿಯಿಂದಿರಬೇಕೆಂದು ನನ್ನ ಅಭಿಪ್ರಾಯವಿದೆ."

ಸತ್ಯವರ್ಮನು ಹೀಗೆ ನುಡಿದ ಕೂಡಲೆ ಪ್ರತಾಪವರ್ಮನಾ ದರೂ ಅವನಂತೆಯೇ ತನ್ನ ಮತವನ್ನು ವ್ಯಕ್ತ ಮಾಡಿದನು ಸೇನಾ ಪತಿಯಾದ ಶಿವದೇವನು ಮಾತ್ರ ಮಂಗಳೇಶನ ಬಾಲ ಬಡಿದನು ಸತ್ಯವರ್ಮ ಪ್ರತಾಪವರ್ಮರ ಮಾತುಗಳನ್ನು ಕೇಳಿ ಮಂಗಳೇಶನಿಗೆ ನೊಣ ತಿಂದಂತಾಯಿತು. ಕರ್ತುಮಕರ್ತುಮನ್ಯಥಾಕರ್ತುಂ ಶಕ್ತಿ ಯುಳ್ಳವನಾದ ತನಗೆ ಇಲ್ಲದ ಬೆದರಿಕೆಯನ್ನು ಹಾಕಿ, ರಾಜ್ಯಕ್ಕೆ ಸಂಬಂಧವಿಲ್ಲದ ಯಃಕಶ್ಚಿತನೆದುರಿನಲ್ಲಿ ಮಾತನಾಡುವಂತೆ ಭಾಷಣ ಮಾಡಿದರೆಂದು ಅವನು ಮಂತ್ರಿ-ಸೇನಾಪತಿಗಳ ಮೇಲೆ ಖತಿಗೊಂ ಡನು; ಆದರೂ ಅವರ ಮಾತನ್ನು ಅಲ್ಲಗಳೆಯುವ ಹಾಗು ಅವರ ವಿರುದ್ಧವಾಗಿ ಆಚರಿಸುವ ಶಕ್ತಿಯು ಇನ್ನೂ ಅವನಲ್ಲಿ ಬಂದಿರಲಿಲ್ಲ. ಅವನು ಮನಸ್ಸಿನಲ್ಲಿಯೇ ಕುದಿಯುತ್ತ ತಟಸ್ಥನಾಗಿ ಕುಳಿತನು. ಅಷ್ಟರಲ್ಲಿ ಚರನೋರ್ವನು ಓಲಗವನ್ನು ಪ್ರವೇಶಿಸಿ, ಪುಲಿಕೇಶಿಗೂ, ಮಂಗಳೇಶನಿಗೂ ಮೂರು-ಮೂರು ಸಾರೆ ನಮಸ್ಕಾರ ಮಾಡಿ:—

"ಮಹಾರಾಜರೇ, ಕೊಂಕಣದ ಅಧಿಕಾರಿಯಾದ ಸ್ವಾಮಿ ರಾಜನು ಹಿಡಿದು, ಕಲಚುರಿಯ ರಾಜನಾದ ಬುದ್ಧರಾಜನನ್ನು ಕೂಡಿ ಕೊಂಡಿರುವನು. ಬುದ್ಧರಾಜನು ಅವನ ಸಹಾಯದಿಂದ ರೇವತಿ ದ್ವೀಪವನ್ನು ಸ್ವಾಧೀನ ಪಡಿಸಿಕೊಂಡನು"

ಚರನ ಮಾತುಗಳನ್ನು ಕೇಳಿದೊಡನೆಯೇ ಮಂಗಳೇಶನು ಆಪಾದ-ಮಸ್ತಕದ ಪರಿಯಂತರವಾಗಿ ಉರಿಯತೊಡಗಿದನು. ರಾಜ ದ್ರೋಹಿಯಾದ ಸ್ವಾಮಿರಾಜನನ್ನೂ, ಮದಾಂಧನಾದ ಬುದ್ಧರಾಜ

ನನ್ನೂ ಹಿಡಿತಂದು ದೇಹಾಂತಶಾಸನ ಮಾಡಬೇಕೆಂದು ಅವನು ನಿಶ್ಚಯಿಸಿಕೊಂಡನು ಅವನು ಆವೇಶಭರದಿಂದ:—

"ಸತ್ಯವರ್ಮರೇ, ನೋಡಿದಿರಾ, ಗೃಹಭೇದಿಗಳ ಕೃಷ್ಣಕಾರಸ್ಥಾನವನ್ನು! ಕೊಂಕಣದ ಮಂಡಲೇಶ್ವರನ ಅಧಿಕಾರವನ್ನು ಕೊಟ್ಟಿರಲು, ಅಷ್ಟರಿಂದ ತೃಪ್ತನಾಗದೆ, ಸ್ವತಂತ್ರನಾಗಬೇಕೆಂದು ನೀಚಹೃದಯದ ಸ್ವಾಮಿರಾಜನು ಬುದ್ಧರಾಜನ ಕಡೆಗೆ ಓಡೆದಿರುವನು. ಅವನ ನೂರು ವರ್ಷಗಳ ಆಯುಷ್ಯವು ತುಂಬುತ್ತ ಬಂದಿರುವದರಿಂದಲೇ ಅವನಲ್ಲಿ ಇಂತಹ ದುರ್ಬುದ್ಧಿಯು ಹುಟ್ಟಿತು. ಆ ಮೂರ್ಖನಾದ ಕಲಚುರಿ ರಾಜನಿಗೆ ಚಾಲುಕ್ಯಸಾಮ್ರಾಜ್ಯದ ಶಕ್ತಿಯು ಗೊತ್ತಿಲ್ಲವೆಂಬಂತೆ ತೋರುತ್ತದೆ ಹರಿಣಿಯು ಹುಲಿಯನ್ನು ಕೆಣಕಿದಂತಾಯಿತು ದಂಡಯಾತ್ರೆಯನ್ನು ಮಾಡಬೇಕೆಂದು ಸ್ಫುರಣಹೊಂದುತ್ತಲಿದ್ದ ನನ್ನ ಬಾಹುಗಳಿಗೆ ಒಳ್ಳೆಯ ಸಂಧಿಯು ಸಾಧಿಸಿತು. ಪ್ರತಾಪವರ್ಮರೇ, ಇಂದು ನಿಮ್ಮ ಸೇನೆಯನ್ನು ಸಜ್ಜುಗೊಳಿಸಿರಿ. ನಾಳೆ ಅರುಣೋದಯಕ್ಕೆ ವಾತಾಪಿಪುರದ ಪಡೆಯನ್ನು ಹೊರಡಿಸಲಿಕ್ಕೇ ಬೇಕು. ಕಲಚುರಿಯ ರಾಜ್ಯವನ್ನು ವಶಪಡಿಸಿಕೊಂಡು ಗೃಹಭೇದಿಯಾದ ಸ್ವಾಮಿರಾಜನಿಗೆ ದೇಹಾಂತಶಾಸನವನ್ನು ವಿಧಿಸುವವರೆಗೆ ವಿಶ್ರಾಂತಿಯನ್ನು ಪಡೆಯುವಂತಿಲ್ಲ!" ಎಂದು ನುಡಿದು, ಮಂಗಳೇಶನು ಸತ್ಯವರ್ಮನು ಮೊದಲು ಆಡಿದ ಮಾತಿಗಾಗಿ, ಅವನ ಮೇಲಿನ ಕುನುಸನ್ನು ತೀರಿಸಿಕೊಳ್ಳಬೇಕೆಂಬ ನಿಮಿತ್ತದಿಂದ ಬುದ್ಧಿಪೂರ್ವಕವಾಗಿ:—"ಸತ್ಯವರ್ಮರೇ, ನಾವು ಈ ಕಾರ್ಯದಲ್ಲಾದರೂ ಕೈ ಹಾಕಬೇಕೋ, ಬೇಡವೋ ಹೇಳಿರಿ. ಪುಲಿಕೇಶಿಯು ಪ್ರಬುದ್ಧನಾಗುವ ವರೆಗೆ ದಂಡೆತ್ತಿ ಹೋಗಬಾರದೆಂದು ನಿಮ್ಮ ಅಭಿಪ್ರಾಯವಿರುವ ಮೂಲಕ ಹೀಗೆ ಕೇಳಬೇಕಾಯಿತು. ನಮ್ಮದೇನು ಹೋಗುವದು? ಹೋದರೆ ಪುಲಿಕೇಶಿಯ ರಾಜ್ಯವೇ ಹೋಗಲಿ! ಹೋದದ್ದು ಹೋಗಲಾಗಿ ಉಳಿದದ್ದು ಕಾಯ್ದುಕೊಂಡಿದ್ದರಾಯಿತು. ಹೋದದ್ದನ್ನು ಗಳಿಸಲಿಕ್ಕೆ ಹೋಗಿ, ಇದ್ದದ್ದನ್ನು ಕಳೆದುಕೊಳ್ಳುವ

ಹವ್ಯಾಸಕ್ಕೆ ಬಿದ್ದು ಕೀರ್ತಿಚಂದ್ರನಿಗೆ ಕಲಂಕ ಹಚ್ಚಿಕೊಳ್ಳಬೇಕೆಂದು ನನ್ನ ಬಯಕೆಯಾದರೂ ಇರುವದಿಲ್ಲ.''

ಮಂಗಳೇಶನ ಮಾತುಗಳು ಸತ್ಯವರ್ಮನಿಗೆ ಹಿರಿತಾಗಿ ಚುಚ್ಚಿದವು. ನಿಸ್ಪೃಹನೂ, ಮಾನಧನನೂ, ಸ್ವಾಮಿಭಕ್ತನೂ ಆದ ತನ್ನ ಮಾತಿನ ಅರ್ಥವನ್ನು ವಿಲಕ್ಷಣವಾಗಿ ತಿಳಿದುಕೊಂಡ ಬಗ್ಗೆ ಅವನು ಮಂಗಳೇಶನ ಮೇಲೆ ರೇಗಿಗೆದ್ದನು. ಅದೂರದರ್ಶಿಯೂ, ಶೀಘ್ರಕೋಪಿಯೂ ಆದ ಮಂಗಳೇಶನು ಬಾಯಿಬಿಟ್ಟಂತೆ ತಾನಾದರೂ ಆಡುವದರಲ್ಲಿ ಸ್ವಾರಸ್ಯವಿಲ್ಲೆಂದು ಧೂರ್ತನಾದ ಅವನು ಸಂತಾಪವನ್ನು ತಡೆದು ಶಾಂತಸ್ವರದಿಂದ:—

''ಮಹಾರಾಜರೇ, ನಿಮ್ಮ ತಿಳುವಳಿಕೆಯು ತಪ್ಪಾದದ್ದಿರುವದು. ಸಾಮ್ರಾಜ್ಯದ ಅಹಿತವನ್ನು ಬಗೆಯುವವರ ಮಾಲಿಕೆಯಲ್ಲಿ ನನ್ನನ್ನು ಎಣಿಸಿದಿರಿ. ನಾನು ಸ್ವಾರ್ಥಸಾಧನೆಗಾಗಿಯಾಗಲಿ, ಸಾಮ್ರಾಜ್ಯಕ್ಕೆ ಹಾನಿಮಾಡಬೇಕೆಂಬ ಉದ್ದೇಶದಿಂದಾಗಲಿ ಇಲ್ಲವೆ ಚಾಲುಕ್ಯ ಸಮ್ರಾಟನು ಹೇಡಿಯಿರುವನೆಂದಾಗಲಿ ಹಾಗೆ ಮಾತನಾಡಲಿಲ್ಲ ತಾನಾಗಿ ಒದಗಿ ಬಂದ ಪ್ರಸಂಗದಲ್ಲಿ ಭಯಭೀತಿಯಿಂದ ಹಿಂಜರಿದು, ಚಾಲುಕ್ಯ ಸಾಮ್ರಾಜ್ಯವು ಕೀರ್ತಿವರ್ಮ ಸಾರ್ವಭೌಮರ ತರುವಾಯ ಬಲಹೀನವಾಯಿತೆಂಬ ಮಾತನ್ನು ದಿಗ್ದರ್ಶನ ಮಾಡಬೇಕೆಂದು ನನ್ನ ಹಾರೈಕೆಯಿರುವದಿಲ್ಲ; ಮತ್ತು ನವ್ಯಸ್ಫೂರ್ತಿಯಿಂದ ಹೋರಾಡಬೇಕೆಂಬ ಕುತೂಹಲವುಳ್ಳ ಸಂಗ್ರಾಮಶೂರರ ಯುದ್ಧಾಕಾಂಕ್ಷೆಯನ್ನು ಕುಗ್ಗಿಸಬೇಕೆಂಬ ದುರ್ಭಾವನೆಯವನು ನಾನಲ್ಲ. ಸಾಮ್ರಾಜ್ಯದಲ್ಲಿ ಸ್ವಾಮಿರಾಜರಂತಹ ಕುಹಕರ ವಾಸ್ತವ್ಯವು ನಾಶವಾಗಿ ಅದು ಸಂಪೂರ್ಣವಾಗಿ ಶಾಂತಿಸಮಾಧಾನವನ್ನು ಹೊಂದಿತೆಂದರೆ, ಕರ್ನಾಟಕ ವೀರಭಟರ ಖಡ್ಗಗಳು ದಶದಿಶೆಗಳಲ್ಲಿ ಝಳಪಿಸಲಿ! ಚಾಲುಕ್ಯರ ವರಾಹಧ್ವಜವು ಆಸೇತು-ಹಿಮಾಚಲದವರೆಗೆ ಮೆರೆಯಲಿ!! ಕರ್ನಾಟಕ ಸಾಮ್ರಾಜ್ಯದ ರಣದುಂದುಭಿಯು ಸಪ್ತದ್ವೀಪಗಳನ್ನೆಲ್ಲ ಗಡಚಿಕ್ಕಿಸಲಿ!!! ಸದ್ಭಾವನಾ ಪ್ರೇರಿತನಾಗಿ,

ನಾನು ಹಾಗೆ ಮಾತನಾಡಿದೆನಲ್ಲದೆ, ಚಾಲುಕ್ಯ ಸಾರ್ವಭೌಮರ ಏಳ್ಗೆಗಾಗಿ ಅಸೂಯೆಗೊಂಡಲ್ಲ.''

ಕಕ್ಕನಾದ ಮಂಗಳೇಶನು ಮಂತ್ರಿಯ ಮನಸ್ಸಿಗೆ ನಡುವಂತೆ ಮಾತನಾಡಿದ್ದು, ಪುಲಿಕೇಶಿಯ ಮನಸ್ಸಿಗೆ ಬರಲಿಲ್ಲ. ಇಷ್ಟು ಹೊತ್ತಿನ ವರೆಗೆ ಸ್ವಸ್ಥಚಿತ್ತದಿಂದ ಕುಳಿತಿದ್ದ ಅವನು ಮಂಗಳೇಶನ ಮಾತನ್ನು ಸೌಮ್ಯ ಮಾತಿನಿಂದ ಅಲ್ಲಗಳೆದು, ಸ್ವಾಮಿನಿಷ್ಠಮಂತ್ರಿಯನ್ನು ಸಮಾಧಾನಪಡಿಸಬೇಕೆಂಬ ಉದ್ದೇಶದಿಂದ:—

"ಕಕ್ಕಾ, ಮಂತ್ರಿಗಳ ಮಾತಿನ ಆಶಯವು ನನಗೆ ಚೆನ್ನಾಗಿ ತಿಳಿದಿರುವದು ಸಾಮ್ರಾಜ್ಯದ ಅಭ್ಯುದಯಕ್ಕೆ ವ್ಯಾಹತಿಯುಂಟಾಗಬೇಕೆಂದು ಅವರ ಮತವಲ್ಲ. ದೇಶದ್ರೋಹಿಗಳಿಗೆ ಶಾಸನಮಾಡುವದಕ್ಕಾಗಲಿ, ನಮ್ಮ ಸ್ವತ್ತನ್ನು ಅಪಹರಿಸಿದವರಿಗೆ ಪ್ರಾಯಶ್ಚಿತ್ತ ಮಾಡುವದಕ್ಕಾಗಲಿ ಅವರೆಲ್ಲಿ ಬೇಡವೆನ್ನುವರು? ನಾಳೆ ಅಗತ್ಯವಾಗಿ ದಂಡೆತ್ತಿ ನಡೆಯಿರಿ. ರೇವತಿ ದ್ವೀಪವನ್ನಷ್ಟೇ ಏಕೆ? ಕಲಚುರಿ ರಾಜ್ಯವನ್ನೆಲ್ಲ ಹಸ್ತಗತ ಮಾಡಿಕೊಂಡು ಬರ್ರಿ. ದಂಡಯಾತ್ರೆಗಾಗಿ ನಾನೂ ನಿಮ್ಮೊಡನೆ ಬರುವೆನು. ಸಾಮ್ರಾಜ್ಯವನ್ನು ರಕ್ಷಿಸುವ ಕಾರ್ಯದಲ್ಲಿ ಯಾರು ಅಡ್ಡಿಯಾದಾರು?''

ಸಮ್ರಾಟ ಪುಲಿಕೇಶಿಯ ಮಾತಿನಿಂದ ಮಂಗಳೇಶ-ಸತ್ಯವರ್ಮರೀರ್ವರೂ ಸಮಾಧಾನ ಹೊಂದಿದರು ಮರುದಿವಸ ದಂಡೆತ್ತಿ ಹೋಗುವ ಸಿದ್ಧತೆಯನ್ನು ಮಾಡಬೇಕಾದುದಿದ್ದದರಿಂದ, ಅಂದಿನ ಸಭೆಯು ನಿಯಮಿತ ವೇಳೆಗೆ ಮುಂಚಿತವಾಗಿಯೇ ವಿಸರ್ಜನೆಯಾಯಿತು.

ಮಾರನೆಯ ದಿನ ಅರುಣೋದಯವಾದ ಕೂಡಲೆ, ಕನ್ನಡಿಗರ ಸೈನ್ಯವು ವೆಂಗುರ್ಲೆಯ ಮೇಲಿಂದ ರೇವತಿ ದ್ವೀಪಕ್ಕೆ ಹೋಗುವದಕ್ಕಾಗಿ ವಾತಾಪಿಪುರ ರಾಜಧಾನಿಯನ್ನು ಬಿಟ್ಟಿತು. ಚಾಲುಕ್ಯರ ರಣದುಂದುಭಿಯು ದಶದಿಶೆಗಳಲ್ಲಿ ವ್ಯಾಪಿಸಿತು. ಚತುರಂಗಬಲದ ತುಳಿತಕ್ಕೆ ಭೂಮಿಯು ನಡುಗಿತು. ಬಾಲ ಸಮ್ರಾಟನು ಸಂಗಡ

ಬಂದ ಸಂಭ್ರಮದಿಂದ ಕನ್ನಡ ಸೈನಿಕರ ವೀರಾವೇಶವು ದ್ವಿಗುಣಿತ ವಾಯಿತು ಅವರು ವೀರಧ್ವನಿಗೈಯುತ್ತ ಹಿಗ್ಗಿಯ ರಭಸದಿಂದ ರೇವತಿದ್ವೀಪವನ್ನು ಮುತ್ತುವದಕ್ಕಾಗಿ ಸಾಗಿದರು.

---

## ದಿವ್ಯಲಾವಣ್ಯ.

ಅಪ್ರತಿಮ ರಣೋತ್ಸಾಹದಿಂದ ಹೊರಟ ಕಡುಗಲಿಗಳಾದ ಕನ್ನಡಿಗರ ಸೈನ್ಯವು ರೇವತೀ ದ್ವೀಪವನ್ನು ತಲಪಿತು ಚಾಲುಕ್ಯರ ಅಜೇಯವಾದ ಅಸಂಖ್ಯಸೇನಾಬಲವು ಸಮ್ರಾಟ ಪುಲಿಕೇಶಿಯ ಹಾಗು ರಣವಿಕ್ರಮ ಮಂಗಳೀಶನ ನೇತೃತ್ವದಲ್ಲಿ ಸಾಗಿ ಬಂದು ಮುತ್ತಿಗೆ ಹಾಕಿದ್ದರಿಂದ, ಕಲಚುರಿ ಶಂಕರಗಣನ ಮಗನಾದ ಬುದ್ಧರಾಜನ ಹಾಗು ವಿಶ್ವಾಸಘಾತಕಿಯೂ, ರಾಜದ್ರೋಹಿಯೂ ಆದ ಸ್ವಾಮಿರಾಜನ ಸೊಂಡಿಗಳು ಹಣಗಿದವು ಮಂಗಳೀಶನೊಡನೆ ಯುದ್ಧ ಮಾಡುವಷ್ಟು ಸಾಮರ್ಥ್ಯವು ತನ್ನಲ್ಲಿಲ್ಲವೆಂಬದು ಹೊಳೆದುದರಿಂದ, ಅವನೊಡನೆ ಹಿದಂಬಡಿಕೆ ಮಾಡಿಕೊಳ್ಳಬೇಕೆಂದು ಬುದ್ಧರಾಜನು ಯೋಚಿಸಿದನು ಹಿಪ್ಪಂದವಾದರೆ ರಾಜದ್ರೋಹಿಯಾದ ತನ್ನ ಕರ್ಮಕ್ಕನುಗುಣವಾಗಿ ಪ್ರಾಯಶ್ಚಿತ್ತ ದೊರೆಯದಿರದೆಂದು ಸ್ವಾರ್ಥಿಯಾದ ಸ್ವಾಮಿರಾಜನಿಗೆ ಹೊಳೆದದ್ದರಿಂದ, ಅವನು ಬಹಳೇ ಚಡಪಡಿಸ ತೊಡಗಿದನು ಯುದ್ಧದಲ್ಲಿ ಮಡಿದರೂ ಅಡ್ಡಿಯಿಲ್ಲ; ಹಿಡಂಬಡಿಕೆ ಮಾಡಿಕೊಂಡು ವೃಥಾ ಮಾನಹಾನಿ-ಪ್ರಾಣಹಾನಿಗಳಿಗೆ ಗುರಿಯಾಗ ಬಾರದೆಂದು ಅವನು ಬುದ್ಧರಾಜನ ಮನಸ್ಸನ್ನು ತಿರುಗಿಸುವದಕ್ಕಾಗಿ ಬಹಳೇ ಪ್ರಯತ್ನಿಸಿದನು. ಕಡೆಗೆ ಅವನ ಪ್ರಯತ್ನಕ್ಕೆ ಯಶವು ದೊರೆಯಿತು ಇದ್ದಷ್ಟು ಸೇನಾಸಾಹಿತ್ಯಗಳನ್ನು ಸಿದ್ಧಪಡಿಸಿಕೊಂಡು ಬುದ್ಧರಾಜನು ಚಾಲುಕ್ಯಸೈನ್ಯಕ್ಕೆ ಎದುರಾದನು.

ಅಪ್ರತಿಮ ಯುದ್ಧೋತ್ಸಾಹಿಗಳೂ, ರಣವೀರರೂ, ಸಮರಪಟುಗಳೂ, ಸಂಗ್ರಾಮಸಿಂಹರೂ ಆದ ಕರ್ನಾಟಕ ಚಾಲುಕ್ಯ ಬಲ

ದೆದುರಿನಲ್ಲಿ ಬುದ್ಧದೇವನ ಸೈನ್ಯವು ಬಹಳ ಹೊತ್ತಿನ ವರೆಗೆ ಹೇಗೆ ತಡೆಯಬೇಕು? ಚಂಡಮಾರುತನಿಂದ ಬೇರುವೆರಿಸಿ ಬೀಳುವ ಕದಳೀ ಬನದಂತೆ ಬುದ್ಧರಾಜನ ಸೈನ್ಯದ ಸ್ಥಿತಿಯಾಯಿತು. ಸ್ವಾಮಿರಾಜನ ಮಾತು ಕೇಳಿ ಸರ್ವನಾಶವಾಗುವ ಪ್ರಸಂಗವೊದಗಿತೆಂದು ಪಶ್ಚಾತ್ತಾಪಬಟ್ಟು, ಅವನು ತನ್ನ ಉಳಿದ ಸೈನ್ಯದಲ್ಲಿಯ ನಂಬಿಗೆಯ ವೀರರ ಅಂಗರಕ್ಷಣೆಯಿಂದ ಅಂತಃಪುರದ ಜನರನ್ನು ಗುಪ್ತವಾಗಿ ಕಳುಹಿಸಿದನು ತಾನು ರಣಭೂಮಿಯಲ್ಲಿ ದೇಹವಿರುವ ವರೆಗೆ ಕಾದಬೇಕೆಂದು ನಿರ್ಧರಿಸಿ, ಹಿಳ್ಳಿಯ ಆವೇಶದಿಂದ ಶತ್ರುಸೈನ್ಯದೊಂದಿಗೆ ಕಾದತೊಡಗಿದನು. ಚಾಲುಕ್ಯರ ಸೈನ್ಯಸಾಗರದ ಮುಂದೆ ಬುದ್ಧರಾಜನ ಅಲ್ಪ ಸಂಖ್ಯಾಕರಾದ ಸೈನ್ಯವು ಹೇಗೆ ತಡೆಯಬೇಕು? ಕಲಚುರಿ ರಾಜನ ಸೇನಾಪತಿಯು ತನ್ನ ಹಿಡೆಯನನ್ನು ಈ ಗಂಡಾಂತರದಿಂದ ಪಾರ ಮಾಡಬೇಕೆಂದು ತನ್ನ ಕೆಲವು ನಂಬಿಗೆಯ ಸೈನ್ಯದೊಡನೆ ಗುಪ್ತ ಮಾರ್ಗದಿಂದ ದಾಟ ಹೋಗುವದಕ್ಕಾಗಿ ಬುದ್ಧರಾಜನಿಗೆ ಸೂಚಿಸಿದನು. ಅವನಾದರೂ ಸ್ವಾಮಿನಿಷ್ಠ ಸೇನಾಪತಿಯ ಸಮಯೋಚಿತವಾದ ಯುಕ್ತಿಯ ಮೇರೆಗೆ ರಣಭೂಮಿಯಿಂದ ಕಾಲ್ದೆಗೆದನು. ಸ್ವಾಮಿರಾಜನಂತೂ ಯಾವಾಗಲೋ ಜಾರಿದ್ದನು ಕಲಚುರಿ ಸೇನಾಪತಿಯು ಹಿಳ್ಳಿಯ ಎದೆಗಾರಿಕೆಯಿಂದ ಕಾದಿ, ಧಾರಾತೀರ್ಥದಲ್ಲಿ ಶಯನ ಮಾಡಿದನು.

ವಿಜಯಶ್ರೀಯು ಚಾಲುಕ್ಯರಿಗೆ ಮಾಲೆ ಹಾಕಿದಳು. ಅವರ ವರಾಹಧ್ವಜವು ರೇವತೀ ದ್ವೀಪದ ಮೇಲೆ ಸ್ಥಾಪಿಸಲ್ಪಟ್ಟಿತು. ಕನ್ನಡಿಗರು ವಿಜಯಾನಂದದ ಉತ್ಸಾಹದಿಂದ ಆ ದ್ವೀಪದ ತುಂಬ ಹರಿಬಿದ್ದು ತಿರುಗಾಡತೊಡಗಿದರು. ಸ್ವಾಮಿದ್ರೋಹಿಯಾದ ಸ್ವಾಮಿರಾಜನನ್ನೂ, ಬುದ್ಧರಾಜನನ್ನೂ ಶೋಧಿಸುವದಕ್ಕಾಗಿ ಮಂಗಳೇಶನು ಅಲ್ಲಲ್ಲಿ ಸೈನಿಕರನ್ನು ಕಳುಹಿಸಿದ್ದನು. ಅವರೀರ್ವರನ್ನು ಹಿಡಿದು ಶಾಸನ ಮಾಡಿದ ಹೊರತು, ಅವನ ಮನಸ್ಸಿಗೆ ಪೂರ್ಣವಾಗಿ ಸಮಾಧಾನವಾಗುವಂತಿರಲಿಲ್ಲ.

ಸಾಯಂಕಾಲದ ಸಮಯವಾಗಿತ್ತು. ಸೂರ್ಯನು ಅದೇ ಪಶ್ಚಿಮಾಂಬುಧಿಯಲ್ಲಿ ಪ್ರವೇಶಿಸಿದ್ದನು. ಕಾಂತನ ಆಗಮನದ ಸಂಭ್ರಮದಿಂದ ಪಶ್ಚಿಮಾರಮಣಿಯ ಮುಖವು ಕಾಂತಿಮಯವಾಗಿತ್ತು. ತಂಗಾಳಿಯು ಸುಳ್ಳನೆ ಸುಳಿಯತೊಡಗಿತ್ತು. ಯುದ್ಧದಲ್ಲಿ ದಣಿದ ಸೈನಿಕರು ಪಶ್ಚಿಮಾಂಬುಧಿಯ ಮೇಲಿನಿಂದ ಬರುವ ಶೀತಲವಾಯು ಲಹರಿಗೆ ಮೈಯೊಡ್ಡಿ ವಿಶ್ರಮಿಸತೊಡಗಿದ್ದರು. ಪುಲಿಕೇಶಿಯು ಕೆಲವು ಸೈನಿಕರೊಡನೆ ಸಮುದ್ರದಲ್ಲಿ ನೌಕಾವಿಹಾರ ಮಾಡತೊಡಗಿದ್ದನು. ಮಧ್ಯಪ್ರದೇಶದವನಾದ ಪುಲಿಕೇಶಿಯು ಸಮುದ್ರವನ್ನು ನೋಡಿದ್ದಿಲ್ಲವಾದ್ದರಿಂದ ಅವನಿಗೆ ಅಂದು ಹಳ್ಳಿಯ ಸಂಭ್ರಮವಾಗಿತ್ತು. ಆ ಅದ್ಭುತವಾದ ಅಂಬುಧಿಯಿಂದ ಹೊರಡುವ ಅಸಂಖ್ಯವಾದ ತರಂಗಗಳಿಂದಲೂ ಅದರ 'ಖಳ ಖಳ'ಸಪ್ಪಳದಿಂದಲೂ ಅವನ ಮನಸ್ಸಿಗೆ ಹಳ್ಳಿಯ ಸೊಗಸೆನಿಸಿತು. ಕೆಲವು ವೇಳೆ ನೌಕಾವಿಹಾರ ಮಾಡಿದ ಬಳಿಕ ಸಂಧಿಪ್ರಕಾಶವು ಮೆಲ್ಲಮೆಲ್ಲಗೆ ಅಡಗತೊಡಗಿತು. ನಾವಾಡಿಗನು ನೌಕೆಯನ್ನು ದಂಡೆಗೆ ತಂದನು. ಎಲ್ಲರೂ ನೌಕೆಯಿಂದಿಳಿದು ಸ್ವಸ್ಥಾನಕ್ಕೆ ಹೋಗಬೇಕೆನ್ನುವಷ್ಟರಲ್ಲಿ ದಂಡೆಯ ಕಡೆಗೆ ಒಂದು ನೌಕೆಯು ಬರುವದನ್ನು ಅವರು ಕಂಡರು. ಅವರು ಆ ನೌಕೆಯ ಕಡೆಗೇ ದೃಷ್ಟಿಯನ್ನಿರಿಸಿ ಕುತೂಹಲದಿಂದ ನಿಂತಿರುವಾಗ, ಒಂದು ಮೋಹೆಯು ಗಿಡದ ಗುಂಪಿನೊಳಗಿಂದ ಸಮುದ್ರದ ದಂಡೆಯ ಕಡೆಗೆ ಬರುತ್ತಿತ್ತು. ಆ ಮೋಹೆಯ ರಕ್ಷಣೆಗೆ ಕೆಲವು ಜನ ಸಶಸ್ತ್ರ ಸೈನಿಕರಿದ್ದರು. ಇದೆಲ್ಲ ಶತ್ರುಗಳ ಕಾರಸ್ಥಾನವೆಂಬದನ್ನು ಪುಲಿಕೇಶಿಯು ಮನಗಂಡು, ಮೇಹೆಯನ್ನು ಮುತ್ತುವದಕ್ಕಾಗಿ ಅವನು ತನ್ನ ಸೈನಿಕರಿಗೆ ಆಜ್ಞಾಪಿಸಿದನು.

ಮೋಹೆಯ ಸಂರಕ್ಷಣೆಗಾಗಿ ಇದ್ದ ಸೈನಿಕರಿಗೂ ಪುಲಿಕೇಶಿಯ ಸೈನಿಕರಿಗೂ ತುಮುಲವಾದ ಯುದ್ಧವು ನಡೆಯಿತು. ಪ್ರತಿಪಕ್ಷಿಗಳ ಕೈಯಲ್ಲಿ ಮೋಹೆಯು ದೊರೆಯಬಾರದೆಂದು ಆ ಸೈನಿಕರು ಜೀವದ ಹಂಗುದೊರೆದು ಕಾದಿದರು. ಅವರಿಗೆ ದೈವವು ಪ್ರತಿಕೂಲವಿದ್ದುದ

ರಿಂದ ಸ್ವಲ್ಪ ಹೊತ್ತಿನಲ್ಲಿಯೇ ಎಲ್ಲರೂ ಭೂಮಿಗೆ ಬಿದ್ದರು. ಅಷ್ಟ ರಲ್ಲಿ ದೂರದಲ್ಲಿ ಬರುತ್ತಿದ್ದ ನಾವೆಯು ದಂಡೆಗೆ ಬಂದಿತು. ಅದರಲ್ಲಿ ನಾಲ್ವತ್ತು-ನಾಲ್ವತ್ತೈದು ಜನ ಶಸ್ತ್ರಧಾರಿಗಳಿದ್ದು, ಅವರು ಶೀಘ್ರ ವಾಗಿ ನಾವೆಯಿಂದಿಳಿದು ಪುಲಿಕೇಶಿಯ ಜನರ ಮೇಲೆ ಬಿದ್ದರು. ಚಾಲುಕ್ಯ ಸೈನ್ಯದೆದುರಿನಲ್ಲಿ ಅವರಾದರೂ ತಡೆಯಲಿಲ್ಲ; ಭೂಮಿಗೆ ಬಿದ್ದರು. ಕೂಡಲೆ ಪುಲಿಕೇಶಿಯು ಮೇಣೆಯ ಬಾಗಿಲ ತೆಗೆಯುವ ದಕ್ಕಾಗಿ ತನ್ನ ಸೈನಿಕರಿಗೆ ಆಜ್ಞಾಪಿಸಿದನು

"ರಾಜ್ಯಲೋಭದಿಂದ ಬಡಿದಾಡುವಾಗ ಅಬಲೆಯರ ಮೇಲೆ ಬಲಾತ್ಕಾರ ಮಾಡುವದು ಸನಾತನಧರ್ಮೀಯರಿಗೆ ಶೋಭಿಸದು"

ಮೇಣೆಯೊಳಗಿನಿಂದ ಹೊರಬಿದ್ದ ಕೋಕಿಲೆಗಿಂತಲೂ ಮಂಜು ಲವಾದ ಧ್ವನಿಯನ್ನು ಕೇಳಿ ಪುಲಿಕೇಶಿಗೆ ವಿಸ್ಮಯವೆನಿಸಿತು ಅವಳ ಕಂಠವು ಶ್ರುತಿ ಮನೋಹರವಿದ್ದಂತೆ, ರೂಪ-ಲಾವಣ್ಯಗಳಾದರೂ ಅವಳಲ್ಲಿಂಬಹುದೆಂದು ಅವನು ತನ್ನ ಸೈನಿಕರಿಂದ ಮೇಣೆಯ ಬಾಗಿ ಲನ್ನು ತೆರೆಯಿಸಿದನು.

"ಅಪ್ಪಯ್ಯಾ! ಪುರುಷಜಾತಿಯ ನಿರ್ಘೃಣತನವು ಅತಿರೇಕ ವಾಯಿತು. ಮಾನವತಿಯರಾದ ಕುಲೀನಸ್ತ್ರೀಯರ ಶೀಲಕ್ಕೆ ಸುಖ ಉಳಿವಿಲ್ಲದಾಯಿತು!" ಎಂದು ನುಡಿದು, ಸುಮಾರು ಹದಿನಾಲ್ಕು ವರ್ಷದ ವಯಸ್ಸಿನ ಕುಮಾರಿಯು ಮೇಣೆಯಿಂದ ಹೊರಗೆ ಬಂದು,

"ಶತ್ರುಗಳಾದರೆ, ಸ್ತ್ರೀಯರ ಮೇಲೆ ಉದ್ದಾಮತನ ಮಾಡು ವದು ವೀರೋಚಿತವೆನಿಸುವದೆ?"

ಆ ಕುಮಾರಿಯು ಗದ್ಗದಸ್ವರದಿಂದ ಹೀಗೆ ಮಾತಾಡಿ, ನಾಯ ಕನಾದ ಪುಲಿಕೇಶಿಯ ಕಡೆಗೆ ನೋಡುತ್ತ ಕ್ರೋಧಸಂತಪ್ತಳಾಗಿ ನಿಂತುಕೊಂಡಳು.

ಪೌರ್ಣಿಮೆಯ ದಿವಸವಾಗಿತ್ತು. ರಾತ್ರಿಯ ಮೊದಲನೆಯ ಪ್ರಹರವಾದುದರಿಂದ ಪೂರ್ಣಚಂದ್ರನು ಮೇಲಕ್ಕೇರಿ ತನ್ನ ಅಮೃತ ಕಿರಣಗಳನ್ನು ಭೂತಲದಲ್ಲಿಯೂ ಅಂಬುಧಿಯ ಮೇಲೆಯೂ ಕಡಹಿ

ದ್ದನು ಚಂದ್ರಕಿರಣಗಳ ಪ್ರಕಾಶದಲ್ಲಿ ಆ ಕುಮಾರಿಯ ಮುಖ ವನ್ನು ನೋಡಿದೊಡನೆಯೇ ಪುಲಿಕೇಶಿಗೆ ಪರಮಾಶ್ಚರ್ಯವಾಯಿತು! ಅವಳಾಡಿದ ಮಾತಿಗೆ ಪ್ರತ್ಯುತ್ತರ ಕೊಡಬೇಕೆನ್ನುವ ಭಾನವು ಅವನ ಲ್ಲುಳಿಯದೆ, ಒಂದೇಸವನೆ ಅವಳ ಮುಖವನ್ನು ನೋಡುತ್ತ ಕುಳಿತು ಬಿಟ್ಟಿದ್ದನು. ಪೌರ್ಣಿಮೆಯ ಚಂದ್ರನನ್ನು ನಾಚಿಸುವ ಅವಳ ಮುಖ, ಸುವರ್ಣವನ್ನು ಜರೆಯುವ ಮೈಬಣ್ಣ, ಉಕ್ಕಿ ಹೊರಚೆಲ್ಲು ತ್ತಿರುವ ದೇಹದ ವಿಲಕ್ಷಣವಾದ ಕಾಂತಿ ಮೊದಲಾದವುಗಳನ್ನು ನೋಡಿ, ಪುಲಿಕೇಶಿಯು ಕೆಲವು ಹೊತ್ತು ದಂಗು ಬಡೆದು ಕುಳಿತನು. ಇವಳೇನು ಸ್ವರ್ಗದಿಂದ ಭೂಮಿಯಲ್ಲಿ ಬಂದ ಶಾಪಭ್ರಷ್ಟದೇವತೆಯಿ ರಬಹುದೇನೆಂದು ಅವನು ವಿಚಾರಿಸತೊಡಗಿದನು. ತನ್ನ ಸೈನಿಕರು ಈ ವರ್ತನದಿಂದ ತನಗೇನು ಹೆಸರಿಡಬಹುದೆಂಬ ಯೋಚನೆಯು ಕೂಡ ಅವನಲ್ಲಿ ಬರಲಿಲ್ಲ ಒಂದೇಸವನೆ ಎವೆಯಿಕ್ಕದೆ ನೋಡುತ್ತ ಕುಳಿ ತುದಕ್ಕೆ ಆ ಸ್ತ್ರೀಯು ತನ್ನನ್ನು ಅವಿನೀತನೆಂದು ಕರೆದಾಳೆಂಬ ಭಯ ವುಳಿದಿರಲಿಲ್ಲ. ಅವಳ ಮಾತಿಗೆ ಉತ್ತರ ಕೊಡಬೇಕೆಂಬದಷ್ಟೇ ಏಕೆ? ಅವಳಾಡಿದ ಮಾತುಗಳು ಸಹ ಸ್ಮರಣೆಯಲ್ಲಿರಲಿಲ್ಲ.

ಆ ಕುಮಾರಿಯು ಶ್ವೇತವರ್ಣದ ದುಕೂಲವನ್ನುಟ್ಟಿದ್ದಳು. ಮೈ ಮೇಲೆ ರತ್ನಖಚಿತವಾದ ಸುವರ್ಣದ ಅಲಂಕಾರಗಳು ಹೊಳೆ ಯುತ್ತಿದ್ದವು ಚಂದ್ರಪ್ರಕಾಶದಿಂದ ಪ್ರಕಾಶಮಾನವಾದ ಪ್ರಕಾಶ ಮಾನ ಚಂದ್ರಮುಖವು ರತ್ನಪ್ರಕಾಶದಿಂದ ಮತ್ತಷ್ಟು ಪ್ರಕಾಶಯು ತವಾಗಿತ್ತು. ಅವಳು ಪರಿಧಾನ ಮಾಡಿದ ಶುಭ್ರವಸ್ತ್ರವು ಚಂದ್ರ ಕಾಂತಿಯಿಂದ ಕಾಂತಿಮಾನವಾಗಿ, ಅವಳ ಕಾಂತಿಮಾನವಾದ ಅಂಗ ಕಾಂತಿಯನ್ನು ಹೆಚ್ಚುಗೊಳಿಸುತ್ತಲಿತ್ತು. ಯೌವನಾವಸ್ಥೆಯಲ್ಲಿ ಪದಾರ್ಪಣ ಮಾಡಿದ ಆ ಕುಮಾರಿಯ ಮುಖಶಶಿಯನ್ನು ಅದೇ ಪ್ರಾಯ ಮೇರೆಯಲ್ಲಿ ಹೆಜ್ಜೆಯಿಕ್ಕಿದ್ದ ಚಂದ್ರನಂತೆ ಕಾಂತಿಯುಳ್ಳ ಪುಲಿಕೇಶಿಯು ಏಕಾಗ್ರದೃಷ್ಟಿಯಿಂದ ನೋಡುತ್ತಿದ್ದುದನ್ನು ಗಗನ ಚಂದ್ರನು ವಿಸ್ಮಿತನಾಗಿ ನೋಡತೊಡಗಿದ್ದನು! ಚಂದ್ರತ್ರಯರ

ವಿಲಕ್ಷಣವಾದ ಈ ಕಪಿಲಾಷಷ್ಠಿಯ ಯೋಗವನ್ನು ನೋಡಿ ಸೈನಿಕ ರಾದರೂ ಬೆರಗಾದರು.

"ಅಹಹಾ! ಇದೆಂತಹ ದಿವ್ಯಲಾವಣ್ಯವು!!"

ಪುಲಿಕೇಶಿಯ ಮುಖದಿಂದ ತಿಳಿಯದೆ ಹೀಗೆ ಉದ್ಗಾರವು ಹೊರಟ ಕೂಡಲೆ, ಆ ಕುಮಾರಿಯು ಸಿಟ್ಟಿನಿಂದ:—

"ಪರಯುವತಿಯರ ವಿಟಂಬನೆ ಮಾಡುವದು ನಿಮ್ಮಂತಹ ಮಹಾನುಭಾವರಿಗೆ ಹಿತಲ್ಲ." ಕುಮಾರಿಯ ಮುಖದಿಂದ ಹೀಗೆ ಮಾತುಗಳು ಹೊರಟ ಕೂಡಲೆ ಪುಲಿಕೇಶಿಗೆ ಬಡಿದೆಬ್ಬಿಸಿದಂತಾ ಯಿತು. ಆಗ ಅವನಿಗೆ ತಾನು ಎಲ್ಲಿದ್ದೇನೆಂಬದರ ಪರಿವೆಯಾಯಿತು. ತನ್ನಿಂದ ಈ ಅವಿಚಾರವು ಘಟಿಸಿ, ಸೈನಿಕರ ಹಾಸ್ಯಕ್ಕೆ ಕಾರಣವಾ ದೆನೆಂದು ಅವನು ಬೆದರಿದನು ಆಗ ಅವನು:—

"ಕುಮಾರೀ. ನೀನಾರು? ಆ ನೌಕೆಯು ಇಲ್ಲಿಗೇಕೆ ಬಂತು? ನಿನ್ನನ್ನು ಈ ಜನರು ಎಲ್ಲಿಗೆ ಕರೆದೊಯ್ಯುತ್ತಿದ್ದರು? ಎಲ್ಲ ಸಂಗತಿ ಯನ್ನು ವಿಶದವಾಗಿ ತಿಳಿಸುವ ವರೆಗೆ ನಿನಗೆ ಬಿಡುಗಡೆಯೇ ಇಲ್ಲ. ಅಂಜದೆ ನಿಜ ಸ್ಥಿತಿಯನ್ನು ನಿವೇದಿಸು."

"ನಾನೋರ್ವ ಹತಭಾಗಿನಿಯಾದ ಕುಮಾರಿಯು. ನೀವು ನನ್ನ ಇತಿಹಾಸವನ್ನು ತೆಗೆದುಕೊಂಡು ಮಾಡಬೇಕಾದುದಾದರೂ ಏನು?"

"ನಿಜಸ್ಥಿತಿಯನ್ನು ಹೇಳದ ಹೊರತು ನಿನಗೆ ಗಂತ್ಯಂತರವೇ ಇಲ್ಲ. ಏನಾದರೊಂದು ಹೇಳಿದರೆ ಮೋಸ ಹೋಗುವಂತಹನು ನಾನಿ ರುವದಿಲ್ಲ. ಮೊದಲು ಸುಳ್ಳಾಡಿ ಹಿಂದಿನಿಂದ ನಿಜಸ್ಥಿತಿಯು ಬೈಲಿಗೆ ಬಿದ್ದಿತೆಂದರೆ, ಎಂದೂ ಕ್ಷಮೆಯು ದೊರೆಯಲಾರದು. ನಿಗ್ರಹಾ ನುಗ್ರಹ ಶಕ್ತಿಯುತನಾದ ಈ ಚಾಲುಕ್ಯ ಸಮ್ರಾಟ ಪುಲಿಕೇಶಿಯ ಸಮ್ಮುಖದಲ್ಲಿ ಹಿಂದಕ್ಕರವನ್ನಾದರೂ ಸಟೆಯಾಡಕೂಡದು"

'ಚಾಲುಕ್ಯ ಸಮ್ರಾಟ ಪುಲಿಕೇಶಿ' ಎಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಆ ಕುಮಾರಿಯು. ಬೆಚ್ಚಿ ಬೆದರಿದಳು ಯಾವನೊಬ್ಬ ಸೇನಾಪತಿಯ ಕುವರನ ಕೈಯಲ್ಲಿ ತಾನು ಶಿಲುಕಿರುವೆನೆಂದು ಅವಳಿಗ

ಭಾಸವಾಗಿತ್ತು. ಆಗ ಅವಳು ಅತ್ಯಂತ ವಿನಯದಿಂದ:—"ಮಹಾ ನುಭಾವರೇ, ತಮ್ಮೆದುರಿನಲ್ಲಿ ಸುಳ್ಳಾಡಲಾರೆನು. ನಾನು ಬುದ್ಧ ರಾಜನ ಕುಮಾರಿಯು. ತಂದೆ ತಾಯಿಗಳೂ ಅಣ್ಣನೂ ಈ ರೇವತಿ ದ್ವೀಪದಿಂದ ಪಾರಾಗಿ ಹೋದರು. ಯುದ್ಧದ ಗೊಂದಲದಲ್ಲಿ ನಾನು ಅವರಿಂದ ತಪ್ಪಿಸಿಕೊಂಡೆನು. ನಾನು ಇಲ್ಲಿಯೇ ಅಡವಿಯಲ್ಲಿ ನನ್ನ ನಂಬಿಗೆಯ ಜನರೊಡನೆ ಒಂದು ಗುಹೆಯಲ್ಲಿ ವಾಸಿಸುತ್ತಿದ್ದೆನು ಇಂದು ನೌಕೆಯನ್ನು ಕಳುಹಿಸುವೆನೆಂದು ನನ್ನ ತಂದೆಯಿಂದ ಗುಪ್ತ ಚಾರನ ಮುಖಾಂತರ ಸುದ್ದಿಯು ಬಂದುದರಿಂದ, ಸಮುದ್ರತೀರಕ್ಕೆ ಬರುತ್ತಿರುವಾಗ ನೀವು ನಮ್ಮ ಸೈನಿಕರನ್ನೆಲ್ಲ ಕೊಂದದ್ದಲ್ಲದೆ, ನನ್ನ ತಂದೆಯಿಂದ ಬಂದ ಸೇನೆಯನ್ನೆಲ್ಲ ನಾಶ ಮಾಡಿದಿರಿ. ತಂದೆ-ತಾಯಿ ಗಳನ್ನಗಲಿದ ನಾನು ನಿರಾಧಾರಿಯಾಗಿರುವೆನು. ದಯಾಳುಗಳಾದ ನೀವು ನನ್ನ ತಾಯಿ-ತಂದೆಗಳ ಬಳಿಗೆ ನನ್ನನ್ನು ಕಳುಹಿಸಿದರೆ ಮಹ ದುಪಕಾರವಾಗುವದು. ನಾನು ನಿಮ್ಮ ಶತ್ರುವಿನ ಪುತ್ರಿಯಾದರೂ, ಅಬಲೆಯಾದ ನನ್ನಲ್ಲಿ ವೈರಭಾವವನ್ನು ತಳೆಯಬೇಡಿರಿ ಪರಸ್ತ್ರೀಯ ರನ್ನು ಹೆತ್ತವ್ವನಂತೆಯೂ, ಭಗಿನಿಯರಂತೆಯೂ ಮನ್ನಿಸುವದು ಸನಾತನ ಧರ್ಮದ ಮೂಲತತ್ವವಾಗಿರುವದು ಸನಾತನ ಧರ್ಮಾ ನುಯಾಯಿಗಳೂ, ವಿಖ್ಯಾತ ಸಾರ್ವಭೌಮರೂ ಆದ ತಾವು ನನಗೆ ಯಾವ ಬಗೆಯ ಪೀಡೆಯನ್ನುಂಟು ಮಾಡದೆ, ನನ್ನ ತಂದೆ-ತಾಯಿ ಗಳ ಬಳಿಗೆ ಕಳಿಸುವೆನೆಂಬ ಅಭಯ ಕೊಡಬೇಕೆಂದು ಶರಗೊಡ್ಡಿ ಬೇಡುವೆನು" ಎಂದು ಆ ಕುಮಾರಿಯು ದೀನಸ್ವರದಿಂದ ಬೇಡಿಕೊಂ ಡದ್ದರಿಂದ, ಪುಲಿಕೇಶಿಯ ಅಂತಃಕರಣವು ಕರಗಿತು. ಆಗ ಅವನು ದಯಾರ್ದ್ರಧ್ವನಿಯಿಂದ:—

"ಕುಮಾರೀ, ನೀನು ಬುದ್ಧರಾಜನ ಪುತ್ರಿಯಿರುವೆಯೆಂದು ನಾನೇನೂ ನಿನ್ನ ವಿಷಯಕ್ಕಾಗಿ ವೈರಭಾವವನ್ನು ತಳೆಯುವದಿಲ್ಲ. ನಿನ್ನ ತಂದೆಯ ಬಳಿಗೆ ಕಳಿಸುವ ವಿಚಾರವನ್ನು ನಾಳೆ ಮಾಡು ವೆನು. ನಿನ್ನ ಶೀಲಕ್ಕೆ ಕಲಂಕವು ತಗಲದಂತೆ ನಾನು ನಿನ್ನೊಡನೆ

ನಡೆಯುವೆನು. ಇಂದು ನಮ್ಮ ಬೀಡಿಗೆ ಸೇರಳು. ನೀನು ಎಳ್ಳಷ್ಟೂ ಭಯಪಡದೆ ನನ್ನ ಕೂಡ ಬರಬೇಕು ಕಂಡಿಯಾ? ಬಲಾತ್ಕಾರದಿಂದಾಗಲಿ, ದುಷ್ಟ ವಾಸನೆಯಿಂದಾಗಲಿ ನಿನ್ನನ್ನು ನಾನು ಕರೆದೊಯ್ಯುವದಿಲ್ಲ. ನಾಳೆಗೆ ನಿನ್ನ ಇಚ್ಛೆಯಿದ್ದಂತೆ ಮಾಡುವದರ ಸಲುವಾಗಿ ವಿಚಾರ ಮಾಡುವೆನು. ನನ್ನಲ್ಲಿರುವ ವರೆಗೆ ನಿನ್ನ ಕೂದಲಿಗೆ ಕೂಡ ಧಕ್ಕೆ ತಗಲಲಾರದು. ಇದೇ ನನ್ನ ಅಭಯವು."

ಆ ಕುಮಾರಿಗೆ ಪುಲಿಕೇಶಿಯ ಮಾತನ್ನು ಕೇಳಿ, ಜೀವದಲ್ಲಿ ಜೀವವು ಬಂದಿತು. ಅವಳು ಅವನೊಡನೆ ಹೊರಡುವದಕ್ಕೆ ಒಪ್ಪಿಕೊಂಡಳು. ಪುಲಿಕೇಶಿಯಾದರೂ ಆ ಸ್ಥಳದಿಂದೆದ್ದನು. ಅಷ್ಟರಲ್ಲಿ—

"ತಂಗೀ, ಲಾವಣ್ಯವತೀ!" ಎಂಬ ಧ್ವನಿಯು ಕೇಳಬಂದಿತು. ಕೂಡಲೆ ಆ ಕುಮಾರಿಯು ಧ್ವನಿಯು ಹೊರಡುವ ಸ್ಥಳಕ್ಕೆ ಧಾವಿಸಿ ಹೋದಳು. ಪುಲಿಕೇಶಿಯೂ ಅವನ ಸೈನಿಕರೂ ಬೆನ್ನು ಹತ್ತಿದರು. ಸಮರದಲ್ಲಿ ಭೂಮಿಗೆ ಬಿದ್ದವರಲ್ಲಿ ಒಬ್ಬನು ಘಾಯದಿಂದ ನರಳುತ್ತ, ಮೀಲಿನಂತೆ ಒದಗುತ್ತಲಿದ್ದನು. ಆ ಕುಮಾರಿಯು ಆ ಮನುಷ್ಯನನ್ನು ನೋಡಿದೊಡನೆಯೆ ಮೂರ್ಛಿತಳಾಗಿ, ದೊಪ್ಪನೆ ಭೂಮಿಗೆ ಬಿದ್ದಳು!

---

## ಭೀಷಣ ಕೊಲೆ.



ಚಾಲುಕ್ಯರ ಶಿಬಿರದಲ್ಲಿ ರಾಜದ್ರೋಹಿಯಾದ ಸ್ವಾಮಿರಾಜನ ಅಪರಾಧದ ವಿಚಾರಣೆ ಮಾಡುವದಕ್ಕಾಗಿ ಸಭೆಯು ಕೂಡಿತ್ತು. ಪುಲಿಕೇಶಿ, ಮಂಗಳೇಶ, ಪ್ರತಾಪವರ್ಮ ಮೊದಲಾದವರು ಉಚಿತಾಸನಗಳಲ್ಲಿ ಕುಳಿತಿದ್ದರು. ತಪ್ಪುಗಾರನನ್ನು ಹಿಡಿತರುವದಕ್ಕಾಗಿ ಮಂಗಳೇಶನು ಅನುಚರರಿಗೆ ಆಜ್ಞಾಪಿಸಿದನು.

ಸ್ವಾಮಿರಾಜನು ರಣಭೂಮಿಯಿಂದ ಓಡಿ ಹೋಗಿ ಒಂದು ಗುಹೆಯಲ್ಲಿ ಅಡಗಿಕೊಂಡಿದ್ದನು. ಪ್ರತಾಪವರ್ಮನು ಅವನನ್ನು

ಶೋಧಿಸಿ ಸೆರೆಯಲ್ಲಿರಿಸಿದ್ದನು. ರಾಜಾಜ್ಞೆಯಾದೊಡನೆಯೇ ಅನು ಚರರು ಅವನನ್ನು ಹಿಡಿದುಕೊಂಡು ಓಲಗದಲ್ಲಿ ಬಂದರು. ಆಗ ಮಂಗಳೇಶನು ಸ್ವಾಮಿರಾಜನನ್ನುದ್ದೇಶಿಸಿ:—

"ನರಾಧಮಾ! ನಾವು ನಿನ್ನನ್ನು ನಂಬಿ ಕೆಟ್ಟೆವು. ನೀನು ನೀಚಸ್ವಾರ್ಥಿಯೂ, ಗೃಹಭೇದಿಯೂ ಇರುವೆಯೆಂಬುದು ಮೊದಲೇ ತಿಳಿದಿದ್ದರೆ, ಕೊಂಕಣದ ಮಂಡಲೇಶ್ವರನ ಅಧಿಕಾರವನ್ನು ಕೊಡುತ್ತಿರಲಿಲ್ಲ. ಕುಲಾಂಗಾರಾ! ನೀನು ಯಾವ ಬಗೆಯ ಸ್ವಾರ್ಥಕ್ಕಾಗಿ ವೈರಿಗಳನ್ನು ಕೂಡಿದೆ? ಯಾವ ಲಾಭವು ದೊರೆಯಬೇಕೆಂಬ ದುರಾಶೆಯಿಂದ ಕರ್ನಾಟಕ ಸಾಮ್ರಾಜ್ಯಕ್ಕೆ ಹಾನಿ ಮಾಡಲುದ್ಯುಕ್ತನಾದೆ? ರಾಜದ್ರೋಹಿಯೇ! ನಿನ್ನ ನೂರು ವರ್ಷಗಳ ಆಯುಷ್ಯವು ಇಂದು ಮುಗಿಯಿತೆಂದು ತಿಳಿದುಕೋ!"

ಮಂಗಳೇಶನು ಕ್ರೋಧಸಂತಪ್ತನಾಗಿ ಹೀಗೆ ನುಡಿದ ಕೂಡಲೆ ಸ್ವಾಮಿರಾಜನು ಎದೆಯೊಡೆದನು. ನಿಷ್ಠುರ ಸ್ವಭಾವದವನಾದ ಇವನಲ್ಲಿ ದಯೆಯು ಹುಟ್ಟುವದಿಲ್ಲವೆಂಬ ವಿಶ್ವಾಸವು ಅವನಿಗೆ ಪೂರ್ಣವಾಗಿದ್ದುದರಿಂದ, ಕ್ಷಮೆಯನ್ನು ಬೇಡಲು ಧೈರ್ಯ ಸಾಲದೆ ಅವನತ ಮುಖನಾಗಿ ನಿಂತಿದ್ದನು. ಆಗ ಪುಲಿಕೇಶಿಯು ಅವನನ್ನುದ್ದೇಶಿಸಿ:—

"ಸ್ವಾಮಿರಾಜಾ, ನೀನು ಚಾಲುಕ್ಯರ ಅನ್ನದಿಂದ ಪರಿಪೋಷಿತನಾಗಿರುವೆಯಲ್ಲವೆ? ಕರ್ನಾಟಕ ಮಾತೆಯು ನಿನಗೆ ಜನ್ಮವಿತ್ತಿಲ್ಲವೆ? ನಿನ್ನ ಪೂರ್ವಜರು ಹೇಗೆ ನಿಷ್ಠೆಯಿಂದ ಚಾಲುಕ್ಯಸಾಮ್ರಾಜ್ಯದ ಸೇವೆ ಮಾಡಿದರೆಂಬದು ನಿನಗೆ ಕೇಳಿ ಗೊತ್ತಿಲ್ಲವೇ? ಸ್ವಾಭಿಮಾನ, ಸ್ವದೇಶಪ್ರೀತಿ, ಸ್ವಜನ ಬಂಧುತ್ವ ಮೊದಲಾದ ಅಲೌಕಿಕ ಗುಣಗಳು ಮನುಷ್ಯನಲ್ಲಿ ಸದೈವ ವಾಸವಾಗಿರುತ್ತಿದ್ದರೆ, ಅವನ ಅಭ್ಯುದಯವಾಗುವದಲ್ಲದೆ, ನೀಚತಮ ಸ್ವಾರ್ಥಕ್ಕೋಸ್ಕರವಾಗಿ ಮಾತೃಗಮನದಂತಹ ಭಯಂಕರವಾದ ಪಾತಕದಿಂದ ಉನ್ನತಿಯನ್ನು ಹೊಂದುವದಕ್ಕೆ ಬಯಸಿದರೆ, ಅಧೋಗತಿಯೇ ದೊರೆಯುವದಲ್ಲದೆ, ಅದರಿಂದ

ಸೌಖ್ಯವು ಲಭಿಸುವದೆ? ಕರ್ನಾಟಕಮಾತೆಯು ನಿನಗೆ ವಿಷವನು ಣಿಸಿದ್ದಳೇನು? ಚಾಲುಕ್ಯಸಮ್ರಾಟರು ನಿನ್ನ ಕುತ್ತಿಗೆಯನ್ನು ಕೊಯ್ಯ ಬಂದಿದ್ದರೇನು? ಕನ್ನಡಿಗರು ನಿನ್ನ ಸ್ವತ್ತನ್ನು ಸೆಳೆದುಕೊಂಡರೇನು? ಅದಾವ ಹಾನಿಯೊದಗಿತೆಂದು ನೀನು ಗೃಹಭೇದಿಯಾದೆ? ಅದ ರಿಂದ ನಿನಗಾದರೂ ಯಾವ ಲಾಭವು ಒದಗಿತು? ಕೊಂಕಣಕ್ಕೆ ಸ್ವತಂತ್ರನಾದ ಅರಸಾಗಬೇಕೆಂದು ನಿನ್ನಿಚ್ಛೆಯಿತ್ತಲ್ಲವೆ? ಇಂತಹ ಕೀಳು ಸ್ವಾರ್ಥಕ್ಕಾಗಿ ಬುದ್ಧರಾಜನನ್ನು ಕೂಡಿದೆಯಲ್ಲವೆ? ಧಿಃಕಾ ರವಿರಲಿ, ನಿನ್ನ ಜೀವಿತಕ್ಕೆ! ಎಲ್ಲಿಯ ಅನ್ನದಿಂದ ಇಷ್ಟು ದಿನಗಳ ವರೆಗೆ ಶರೀರವನ್ನು ಪೋಷಿಸಿದೆಯೋ, ಅದೇ ಶರೀರವನ್ನು ಅದೇ ಕರ್ನಾಟಕ ಮಾತೃಭೂಮಿಯ ನಾಶಕ್ಕಾಗಿ ಉಪಯೋಗಿಸಿದ ನಿನ್ನ ದುಷ್ಟಬುದ್ಧಿಗೆ ಶತಶಃ ಧಿಃಕಾರವಿರಲಿ!''

"ಮಹಾರಾಜರೆ, ನನ್ನಿಂದ ಸರ್ವಸ್ವ ಅಪರಾಧವಾಗಿರುವದು. ಕ್ಷಮೆಯಾದರೆ ಈ ಶರೀರವನ್ನು ಚಾಲುಕ್ಯ ಸಾಮ್ರಾಜ್ಯದ ಸೇವೆಯ ಲ್ಲಿಯೇ ಸವೆಸುವೆನು. ಅಜ್ಞಾನದಿಂದ ಅಪರಾಧವು ಘಟಿಸಿದೆ. ಮಹಾನುಭಾವರಾದ ತಾವು ನನಗೆ ಜೀವದಾನ ಕೊಟ್ಟು, ಉದ್ಧರಿ ಸುವಿರೆಂದು ಪೂರಾ ನಂಬಿರುವೆನು.''

ಪುಲಿಕೇಶಿಯು ದಯಾಳುವೆಂಬದನ್ನು ಸ್ವಾಮಿರಾಜನು ಮನ ಗಂಡದ್ದರಿಂದ, ಅವನಲ್ಲಿ ಕ್ಷಮಾಯಾಚನೆ ಮಾಡಿದರೆ ಅದರ ಲಾಭವು ದೊರೆಯದಿರದೆಂದು ಹೀಗೆ ಪ್ರಾರ್ಥಿಸಿದನು; ಆದರೆ ಮಂಗಳೇಶನು ಈ ಸಮಯದಲ್ಲಿ ದಯಾ-ದಾಕ್ಷಿಣ್ಯಗಳಿಗೆ ಅನುವು ಕೊಡುವಂಥವ ನಿರಲಿಲ್ಲ. ಚಟ್ಟನೆ ಪುಲಿಕೇಶಿಯ ಬಾಯಿಂದ ಪ್ರಾಣದಾನದ ಅಭಯ ವೆಲ್ಲಿ ಹೊರಬೀಳುವದೋ? ಎಂದು ಅವನು ಸ್ವಾಮಿರಾಜನ ಮಾತು ಮುಗಿಯುವದರೊಳಗೆ ನಡುವೇ ಬಾಯಿ ಹಾಕಿ, ಕ್ರೋಧಸಂತಪ್ತ ಧ್ವನಿಯಿಂದ:—

"ದೇಶದ್ರೋಹಿಯಾದ ನಿನಗೆ ದೇಹಾಂತ ಶಾಸನವನ್ನು ವಿಧಿ ಸಿದರೇನೇ ನ್ಯಾಯದೇವತೆಯು ಸಂತುಷ್ಟಳಾಗುವಳಲ್ಲದೆ, ಜೀವದಾನ

ನನ್ನು ಕೊಡುವದರಿಂದ ಅವಳ ದ್ರೋಹ ಮಾಡಿದಂತಾಗುವದು. ನೀನು ಪ್ರಾಣದಾಶೆಯಿಂದ ವ್ಯಥಾ ದಣಿದುಕೊಳ್ಳಬೇಡ. ಅಂತ್ಯ ಕಾಲಕ್ಕಾದರೂ ಭಗವನ್ನಾಮ ಸ್ಮರಣೆ ಮಾಡು.''

ಹೀಗೆ ಮಂಗಳೇಶನು ನುಡಿದು ಅತ್ಯಂತ ಭೀಷಣವಾದ ರೀತಿ ಯಿಂದ ಅವನ ಕೊಲೆ ಮಾಡಿಸಬೇಕೆಂದು ಆಲೋಚಿಸಿ, ಇಬ್ಬರು ಕೊಲೆಗಡಕರನ್ನು ಕರೆಯಿಸಿದನು. ಸ್ವಾಮಿರಾಜನ ಮರಣವು ಬಹಳೇ ಕ್ರೂರತನದಿಂದಾಗುವದೆಂಬದು ಪುಲಿಕೇಶಿಗೆ ಮನವರಿಕೆಯಾಯಿತು. ಕೋಮಲಹೃದಯದ ಆ ಬಾಲರಾಜನು ಅವನ ಜೀವವನ್ನು ರಕ್ಷಿಸು ವದಕ್ಕಾಗಿ ಮನಸ್ಸು ಮಾಡಿದನು ಅವನು ಮಂಗಳೇಶನನ್ನು ಕುರಿತು:—

''ನೀವು ಅನ್ನುತ್ತಿರುವಂತೆ ಈ ದೇಶದ್ರೋಹಿಗೆ ದೇಹಾಂತ ಶಾಸನವೇ ವಿಹಿತವು ಇವನನ್ನು ಕೊಂದು ಚಾಲುಕ್ಯ ಸಮ್ರಾಟರ ಕ್ರೂರತನದ ಚಿತ್ರವನ್ನು ಜಗತ್ತಿನೆದುರಿನಲ್ಲಿಡುವದಕ್ಕಿಂತ, ಆಜನ್ಮ ವಾಗಿ ಕಾರಾಗೃಹದಲ್ಲಿ ಹಾಕುವದು ಉಚಿತವೆಂದು ನನಗೆ ತೋರು ವದು. ಆಮರಣ ಬಂಧನದಲ್ಲಿರುವ ಮನುಷ್ಯನು ಇದ್ದರೂ ಸತ್ತಂ ತೆಯೇ ಸರಿ. ತಾವು ಸಾಮ್ರಾಜ್ಯದ ಪ್ರತಿನಿಧಿಗಳಿದ್ದರೂ, ನಾನು ಅಲ್ಪವಯಸ್ಕನಿದ್ದರೂ ನನ್ನ ಸದಸದ್ವಿವೇಕ ಬುದ್ಧಿಗೆ ಯೋಗ್ಯವಾಗಿ ತೋರಿದ್ದನ್ನು ತಮ್ಮೆದುರಿಗೆ ಆಡಿರುವೆನು. ಸ್ವಾಮಿರಾಜನ ಜೀವ ನವು ಅತ್ಯಂತ ಬೆಲೆಯುಳ್ಳದ್ದಿದ್ದು, ಪ್ರಸಂಗವಶಾತ್ ಅವನಿಂದ ಉಪ ಯೋಗವಾಗಬಹುದು. ಅಜ್ಞತನದಿಂದ ಜಾರಿದ ಮನುಷ್ಯನು ಪಶ್ಚಾತ್ತಾಪದಿಂದ ಪರಿಶುದ್ಧನಾದನೆಂದರೆ, ಅವನಿಂದ ಮಹತ್ವದ ಕಾರ್ಯಗಳಾಗುತ್ತವೆ ಅವನ ವರ್ತನವು ಸುಧಾರಿಸುವ ವರೆಗೆ ಬಂಧನದಲ್ಲಿರಿಸಿರಿ. ಒಬ್ಬ ಪ್ರಸಿದ್ಧ ಕನ್ನಡಿಗನನ್ನು ಇಹಲೋಕದಿಂದ ಹೊರದೂಡುವದು ಹಿತಕರವೆನಿಸಲಾರದು!''

ಪುಲಿಕೇಶಿಯ ಮಾತುಗಳಿಂದ ಮಂಗಳೇಶನು ಸಂತಪ್ತನಾ ದನು. ನಿನ್ನೆ-ಮೊನ್ನಿನವನಾದ ಇವನು ಅನುಭವಿಕನಾದ ತನಗೆ

ಬುದ್ಧಿವಾದ ಮಾಡುವದಕ್ಕೆ ಮುಂದುವರಿದದ್ದರಿಂದ ಮಂಗಳೇಶನಿಗೆ ಬಹಳ ಸಿಟ್ಟು ಬಂತು ಆಗ ಅವನು:—

"ಅಲ್ಪವಯಸ್ಕರಾದ ನಿಮಗಿನ್ನೂ ರಾಜಕಾರಣದ ಅನುಭವ ವಿಲ್ಲ. ಕೇವಲ ದಯೆಯನ್ನು ತೋರಿಸತೊಡಗಿದರೆ, ಅದರ ಪರಿಣಾಮವು ಹಿತಕರವಾಗದೆಂಬುದು ಈಗಾಗಲೆ ನಿಮಗೆ ಹೇಗೆ ತಿಳಿಯಬೇಕು? ಅಪರಾಧಕ್ಕೆ ಸರಿಯಾಗಿ ಶಾಸನವನ್ನು ವಿಧಿಸಿ, ಚಾಲುಕ್ಯಸಮ್ರಾಟರು ನ್ಯಾಯಪಕ್ಷಪಾತಿಗಳೆಂಬುದನ್ನು ಜಗತ್ತಿಗೆ ತೋರಿಸಲಿಕ್ಕೆ ಬೇಕು ಇವನಿಗೆ ಕ್ಷಮಾದಾನ ಮಾಡುವದೆಂದರೆ, ದೇಶದ್ರೋಹಿಗಳಿಗೆ ಉತ್ತೇಜನ ಕೊಟ್ಟಂತೆಯೇ ಸರಿ ಸಮ್ರಾಟರೇ, ನೀವೀ ಕಾರ್ಯದಲ್ಲಿ ಕೈ ಹಾಕಬೇಡಿರಿ. ಚಾಲುಕ್ಯ ಸಿಂಹಾಸನದಲ್ಲಿ ನಿಷ್ಠೆಯಿಂದ ನಡೆಯುವವನಾದ ನಾನು ಆ ಸಾಮ್ರಾಜ್ಯದ ದ್ರೋಹ ಮಾಡಲೆಳಿಸುವದಿಲ್ಲ. ನಾನು ಯಾವ ಬಗೆಯಿಂದ ನಿರ್ಧರಿಸಿಕೊಂಡಿರುವೆನೋ, ಹಾಗೆ ಕಾರ್ಯ ಮಾಡುವವನೇ! ನನ್ನ ನಿಶ್ಚಯವು ಯಾರ ಬೋಧದಿಂದಲೂ ಚಲಿಸುವಂತಿರುವದಿಲ್ಲ."

"ಪ್ರಭುಗಳೇ, ನೀವು ಈ ರೀತಿಯಾಗಿ ನೈರ್ಘೃಣ್ಯತೆಯನ್ನು ತೋರಿಸಬಾರದು. ಬಾಲಸಮ್ರಾಟರ ಅಭಿಪ್ರಾಯದಂತೆ ನನಗೆ ಜೀವದಾನ ಕೊಡಿರಿ. ನಾನು ಯಾವಜ್ಜೀವವೂ ನಿಷ್ಠೆಯಿಂದ ಸಾಮ್ರಾಜ್ಯದ ಸೇವೆ ಮಾಡಿಕೊಂಡಿರುವೆನು. ನನಗೆ ಕೃತಕರ್ಮದ ಪಶ್ಚಾತ್ತಾಪವಾಗಿದೆ."

ಸ್ವಾಮಿರಾಜನ ಈ ವಿನಂತಿಯಿಂದ ಮಂಗಳೇಶನಲ್ಲಿ ದಯೆಯು ಹುಟ್ಟಲಿಲ್ಲ ಅವನು ಕೊಲೆಗಡಕರನ್ನು ಕುರಿತು ನಿಷ್ಠುರತೆಯಿಂದಲೂ, ತ್ವೇಷದಿಂದಲೂ:—

"ಇವನ ನಾಲಿಗೆಯನ್ನು ಸೀಳಿ ಬಿಡಿರಿ! ಈ ನೀಚನ ಮಾತುಗಳನ್ನು ಕೇಳುವದು ಕೂಡ ನನಗೆ ಅಸಹ್ಯವೆನಿಸಿದೆ."

ಕೊಲೆಗಡಕರು ಈ ಆಜ್ಞೆಯನ್ನು ಕೇಳಿದೊಡನೆಯೇ ಸ್ವಾಮಿರಾಜನನ್ನು ವಧಸ್ತಂಭಕ್ಕೆ ಬಿಗಿಯತೊಡಗಿದರು. ತನ್ನ ಮರಣವು

ಅತ್ಯಂತ ಭಯಂಕರ ಸ್ಥಿತಿಯಿಂದಾಗುವದೆಂಬದು ಸ್ವಾಮಿರಾಜನಿಗೆ ತಿಳಿಯಿತು. ಆಗ ಅವನು ದೀನವಾಣಿಯಿಂದ:—

"ಮಹಾರಾಜರೇ! ನನ್ನನ್ನು ಕೊಲ್ಲುವದಕ್ಕೆ ಬೇಡೆನ್ನುವದಿಲ್ಲ; ನಾಲಿಗೆಯನ್ನು ಸೀಳಿಸಿ, ಕಣ್ಣುಗಳನ್ನು ಹಿಡೆಯಿಸಿ, ಮೈದೊಗಲು ಸುಲಿಸಿ ಯಾತನೆಗೊಳಿಸಿ ಕೊಲ್ಲುವದಕ್ಕಿಂತ, ಒಮ್ಮೆಲೆ ಶಿರಚ್ಛೇದ ಮಾಡಿ ನಿಮ್ಮ ತೃಷ್ಣೆಯನ್ನು ಶಾಂತಪಡಿಸಿಕೊಳ್ಳಿರಿ."

"ಹಾಗೆಂದಿಗೂ ಆಗುವಂತಿಲ್ಲ. ಕೊಲೆಗಡಕರ ಕೊಲೆಯ ನೈಪುಣ್ಯವನ್ನು ನಾನು ಪರೀಕ್ಷಿಸಬೇಕಾಗಿದೆ. ಅವರು ತಮ್ಮ ಜಾಣ್ಮೆಯನ್ನು ಚನ್ನಾಗಿ ತೋರಿಸಿದರೆ, ಪಾರಿತೋಷಕವು ಸರಿಯಾಗಿ ದೊರೆಯುವದು. ಮೃತ್ಯುವಿನ ಬಾಯಿಯಲ್ಲಿ ಕಾಲಿಟ್ಟ ನೀನು, ಆ ಬಡವರ ಹೊಟ್ಟೆಯ ಮೇಲೆ ಕಾಲು ಕೊಡಬೇಕೆನ್ನುವಿಯಾ?" ಎಂದು ನುಡಿದು, ಮಂಗಳೇಶನು ಕೊಲೆಗಡಕರನ್ನು ಕುರಿತು:—

"ಹೂಂ! ತಡವೇಕೆ? ನಾಲಿಗೆಯನ್ನು ಸೀಳಿರಿ! ಕಣ್ಣುಗಳನ್ನು ಮೀಟಿರಿ! ಮೈದೊಗಲು ಸುಲಿಯಿರಿ! ಬೆರಳುಗಳಿಗೆ ಎಣ್ಣೆಯರಿವೆ ಸುತ್ತಿ ದೀಪ ಹಚ್ಚಿರಿ!"

ಮಂಗಳೇಶನು ಅಂತಕನಂತೆ ಕ್ರೂರತನದಿಂದ ಶಾಸನ ಮಾಡುವನೆಂದು ಪುಲಿಕೇಶಿಗೆ ತಿಳಿಯಿತು. ಅವನು ಭೀಷಣವಾದ ದೃಶ್ಯವನ್ನು ನೋಡಲಾರದೆ, ಅಲ್ಲಿಂದ ಎದ್ದನು. ಸೇನಾಪತಿಯಾದ ಪ್ರತಾಪವರ್ಮನಾದರೂ ಸ್ಥಳಬಿಟ್ಟನು. ಮಂಗಳೇಶನು ಯಾರ ಹಂಗನ್ನೂ ನೋಡದೆ, ತನ್ನ ಕರ್ತವ್ಯವನ್ನು ಕೊನೆಗಾಣಿಸುವದರಲ್ಲಿಯೇ ಮಗ್ನನಾಗಿದ್ದನು.

ದೈವಹತನಾದ ಸ್ವಾಮಿರಾಜನ ಕೊಲೆಯ ಚಿತ್ರವನ್ನು ಯಥಾಸ್ಥಿತವಾಗಿ ಚಿತ್ರಿಸುವಂತಹ ಕಲೆಯು ನಮ್ಮ ಲೆಕ್ಕಣಿಕೆಯಲ್ಲಿಲ್ಲ! ರಾಕ್ಷಸೀ ಹೃದಯದವನಾದ ಮಂಗಳೇಶನು ಎಲ್ಲ ಜನರ ಅಭಿಪ್ರಾಯವನ್ನು ತುಚ್ಛೀಕರಿಸಿ, ಅವನ ಕೊಲೆಯನ್ನು ಅತ್ಯಂತ ಭೀಷಣವಾದ ರೀತಿಯಿಂದ ಮಾಡಿಸಿದನು!

ಸ್ವಾಮಿರಾಜನ ಕೊಲೆಯಾಗುವಾಗ ಅಲ್ಲಿ ಒಂದು ವ್ಯಕ್ತಿಯು ಕುಳಿತುಕೊಂಡಿತ್ತು. ಅದರ ಕಣ್ಣುಗಳು ಕೆಂಡವನ್ನು ಕಾರುತ್ತಿರುವಂತೆ ತೋರುತ್ತಿತ್ತು. ಆ ವ್ಯಕ್ತಿಯು ತನ್ನ ಕೈಯೊಳಗಿನ ಖಡ್ಗದ ಕಡೆಗೊಮ್ಮೆ, ಮಂಗಳೇಶನ ಮುಖವನ್ನೊಮ್ಮೆ ತೀಕ್ಷ್ಣದೃಷ್ಟಿಯಿಂದ ನೋಡುತ್ತಲಿತ್ತು. ತನ್ನ ಸಾಹಸವು ಸಿದ್ಧಿಸದೆ, ವ್ಯರ್ಥವಾಗಿ ಅನರ್ಥವನ್ನು ತಂದುಕೊಂಡಂತಾಗುವದೆಂದು, ಆ ವ್ಯಕ್ತಿಯು ಸಂತಾಪವನ್ನು ತಡೆದು, ಅಲ್ಲಿಯ ಭಯಂಕರವಾದ ಪ್ರಕಾರವನ್ನು ನೋಡಲಾಗದೆ ಅಲ್ಲಿಂದ ಜಾರಿ ಹೋಯಿತು. ವಾಚಕ ಮಹಾಶಯರೇ, ಆ ವ್ಯಕ್ತಿಯು ಯಾವದೆಂಬದು ಪ್ರಸಂಗಾನುಸಾರವಾಗಿ ತಿಳಿಯಬಹುದು.

ಸ್ವಾಮಿರಾಜನ ಕಲೇವರವು ಹದ್ದು-ನಾಯಿಗಳ ಭಕ್ಷ್ಯಸ್ಥಾನಕ್ಕೆ ಬೀಳಬೇಕೆಂಬ ಇಚ್ಛೆಯಿಂದ ಮಂಗಳೇಶನು ಅದನ್ನು ಹಾಗೆಯೇ ಚಲ್ಲಿಸಿದನು. ಸಂತಾಪದಿಂದ ಕುದಿಯುತ್ತಿದ್ದ ತನ್ನ ರಾಕ್ಷಸೀಹೃದಯವನ್ನು ಈ ಭೀಷಣವಾದ ಕೊಲೆಯಿಂದ ಶಾಂತಪಡಿಸಿ, ಕೃತಕೃತ್ಯನಾದೆನೆಂಬ ಅವನು ಅಂದಿನ ಸಭೆಯ ಕಾರ್ಯವನ್ನು ಮುಗಿಸಿದನು.

---

## ನಾನು ನಿಜವಾಗಿಯೂ ನಿಮ್ಮವಳು.

ನಿಶ್ಚೇಷ್ಟಿತಳಾದ ಬುದ್ಧರಾಜಪುತ್ರಿಯನ್ನು ಮೇಣೆಯಲ್ಲಿ ಹಾಕಿಕೊಂಡು ಪುಲಿಕೇಶಿಯು ತನ್ನ ಸೈನ್ಯ ಸಹಿತವಾಗಿ ಶಿಬಿರಕ್ಕೆ ಬಂದನು. ಗಾಯದಿಂದ ಬಳಲುತ್ತಿರುವ ಶತ್ರುಪಕ್ಷೀಯ ಮನುಷ್ಯನನ್ನಾದರೂ ಅವನು ತನ್ನ ನಿವಾಸಕ್ಕೆ ತರಿಸಿ, ಯೋಗ್ಯ ರೀತಿಯಿಂದ ಆರೈಕೆ ಮಾಡಿಸಿದನು. ಬುದ್ಧರಾಜಪುತ್ರಿಯಾದರೂ ಕೆಲಹೊತ್ತಿನ ಮೇಲೆ ಚೇತರಿಸಿಕೊಂಡು ಎದ್ದು ಕುಳಿತಳು. ವಾಚಕ ಮಹಾಶಯರೇ, ಗಾಯ ಹೊಂದಿ ಬಿದ್ದಿರುವ ಮನುಷ್ಯನು ಯಾರಿರಬಹುದು? ಅವ

ನಿಗೂ ಬುದ್ಧರಾಜನ ಪುತ್ರಿಗೂ ಸಂಬಂಧವೇನಿರಬಹುದು? ಎಂಬ ದನ್ನು ತಿಳಿದುಕೊಳ್ಳುವದಕ್ಕೆ ತಮ್ಮ ಮನಸ್ಸು ಆತುರಪಡುತ್ತಿರಬಹು ದಲ್ಲವೆ? ಹಾಗಿದ್ದರೆ ಅವರ ಪವಿತ್ರ ಸಂಬಂಧವನ್ನಷ್ಟು ಹೇಳಿ, ಮುಂದಿನ ಕಥಾನಕವನ್ನು ವಿವರಿಸುವದು ಯುಕ್ತವು.

ಗಾಯ ಹೊಂದಿದ ಮನುಷ್ಯನು ಸ್ವಾಮಿರಾಜನ ಕುಮಾರ ನಾದ ವೀರಸೇನನು. ಬುದ್ಧರಾಜನ ಪಲಾಯನದ ಗೊಂದಲದಲ್ಲಿ ಅವನ ಪ್ರೀತಿಯ ಪುತ್ರಿಯಾದ ಲಾವಣ್ಯವತಿಯು ತಪ್ಪಿಸಿಕೊಂಡು ರೇವತಿ ದ್ವೀಪದಲ್ಲಿಯೇ ಉಳಿದದ್ದರಿಂದ, ಅವನು ಅವಳನ್ನು ಕರೆತರು ವದಕ್ಕಾಗಿ ಸ್ವಾಮಿ-ರಾಜನ ಕುಮಾರನಾದ ವೀರಸೇನನನ್ನು ಕಳುಹಿಸಿ ದ್ದನು. ವೀರಸೇನನು ಲಾವಣ್ಯವತಿಯನ್ನು ಒಡಹುಟ್ಟಿದವಳಂತೆ ತಿಳಿದು, ಅವಳ ವಿಷಯಕ್ಕೆ ಅಪ್ರತಿಮವಾದ ಪ್ರೇಮಭಾವವುಳ್ಳವ ನಾಗಿದ್ದನು. ಅವನ ಕಾರ್ಯಕ್ಕೆ ಆಕಸ್ಮಿಕವಾದ ತೊಂದರೆಯೊದಗಿ ಲಾವಣ್ಯವತಿಯು ಶತ್ರುಗಳ ಕೈ ಸೇರಲು, ಅವನು ದುಃಖಿತನಾಗಿ ಗಾಯ ಹೊಂದಿದ ಸ್ಥಿತಿಯಲ್ಲಿಯೇ: "ತಂಗೀ, ಲಾವಣ್ಯವತೀ!" ಎಂದು ಒದರುತ್ತ ಬಿದ್ದಿದ್ದನು. ಅವನಿಗಾದ ಭಯಂಕರ ಗಾಯಗ ಳನ್ನೂ, ಅವನ ಶರೀರದಿಂದ ಹೊರಚೆಲ್ಲುವ ನೆತ್ತರದ ಪ್ರವಾಹವನ್ನೂ ನೋಡಿ, ಲಾವಣ್ಯವತಿಯು ನಿಶ್ಚೇಷ್ಟಿತಳಾಗಿ ಭೂಮಿಗೆ ಬಿದ್ದಳು!

ದಯಾಘನನಾದ ಪುಲಿಕೇಶಿಯು ಶತ್ರುಪಕ್ಷದವನೆಂದು ವೀರ ಸೇನನ ವಿಷಯಕ್ಕೆ ವೈರಭಾವವನ್ನು ತಳೆಯದೆ, ಔಷಧೋಪಚಾರ ಗಳಿಂದ ಅವನನ್ನು ಚನ್ನಾಗಿ ಉಪಚರಿಸಿದನು. ಶೋಕದಿಂದಲೂ, ಭಯದಿಂದಲೂ ವಿಹ್ವಲಳಾದ ಲಾವಣ್ಯವತಿಗೆ ವಿಶ್ರಾಂತಿ ದೊರೆಯ ಬೇಕೆಂದು ಅವಳೊಡನೆ ಮಾತನಾಡುವ ಹವ್ಯಾಸಕ್ಕೆ ಹೋಗಲಿಲ್ಲ.

ಮಾರನೆಯ ದಿನ ಬೆಳಗಾದ ಕೂಡಲೆ ಪುಲಿಕೇಶಿಯು ಲಾವ ಣ್ಯವತಿಯ ಯೋಗಕ್ಷೇಮವನ್ನು ವಿಚಾರಿಸುವದಕ್ಕಾಗಿ ಅವಳ ಬಳಿಗೆ ಬಂದನು. ನಿರಾಹಾರಿಯಾದ ಅವಳು ಮ್ಲಾನವದನೆಯಾಗಿ ಕಣ್ಣೀ ರುದುರಿಸುತ್ತ ಕುಳಿತಿದ್ದಳು. ಪುಲಿಕೇಶಿಯನ್ನು ನೋಡಿದ ಕೂಡಲೆ

ಅವಳ ಮನಸ್ಸಿಗೆ ಒಂದು ವಿಧವಾದ ಆನಂದವುಂಟಾಯಿತು. ದೈನ್ಯೋಕ್ತಿಯಿಂದ ಅವನ ಮನಸ್ಸನ್ನು ಕರಗಿಸಿ, ತಂದೆಯ ಬಳಿಗೆ ಕಳಿಸುವಂತೆ ಮಾಡಬೇಕೆಂಬ ಇಚ್ಛೆಯಿಂದ ಅವಳು:—

"ಮಹಾಶಯರೇ, ಈ ಅಬಲೆಯನ್ನೇಕೆ ಬಂಧನದಲ್ಲಿರಿಸಿರುವಿರಿ? ವೀರಾಗ್ರಣಿಗಳ ಶೂರತನವು ಸರಿಸಮಾನಸ್ಕಂಧರಾದ ವೀರರಲ್ಲಿಯೇ ತೋರಿಸತಕ್ಕದ್ದಿರುವದಲ್ಲದೆ, ನಿರಾಧಾರಿಯೂ, ದೀನಳೂ ಆದ ಈ ಅಬಲೆಯ ಮೇಲಲ್ಲ. ನೀವು ನನ್ನನ್ನು ತಂದೆಯ ಬಳಿಗೆ ಕಳಿಸಿದರೆ, ತುಂಬಾ ಉಪಕೃತಳಾಗುವೆನು."

"ಚಾಲುಕ್ಯ ಸಮ್ರಾಟನಾದ ಈ ಪುಲಿಕೇಶಿಯಲ್ಲಿ ನಿನಗಾವ ಬಗೆಯ ದುಃಖವೂ, ಬಂಧನವೂ ಉಂಟಾಗಲಾರವು. ಶತ್ರುವಿನ ಮಗಳೆಂಬ ಕುನುಸು ನನ್ನಲ್ಲಿ ತಿಲಾಂಶವಾದರೂ ಇಲ್ಲ"

"ಧನ್ಯ! ಧನ್ಯ!! ನಿಮ್ಮ ಸದ್ಗುಣಗಳ ಧನ್ಯವಾದವನ್ನು ಎಷ್ಟು ಮಾಡಿದರೂ ಕಡಿಮೆಯಿರುವದು! ದೊಡ್ಡವರ ಮನಸ್ಸು ದೊಡ್ಡದಾಗಿಯೇ ಇರುವದು. ನನ್ನನ್ನು ಈಗಲೆ ನನ್ನ ತಂದೆಯ ಬಳಿಗೆ ಕಳುಹಿಸಿ, ಪುಣ್ಯ ಕಟ್ಟಿಕೊಳ್ಳಿರಿ. ನನ್ನ ಅಣ್ಣನ ಸ್ಥಿತಿಯಾದರೂ ಅಶಾಜನಕವಿರುವದು. ಅವನನ್ನಾದರೂ ನನ್ನ ಸಂಗಡವೇ ಕಳುಹಿಸಿರಿ."

"ಅವನು ನಿನ್ನ ಅಣ್ಣನೇನು? ಅವನ ಹೆಸರೇನು?" ಎಂದು ಪುಲಿಕೇಶಿಯು ಉತ್ಕಂಠೆಯಿಂದ ಕೇಳಿದನು. ಈ ಪ್ರಸಂಗದಲ್ಲಿ ನಿಜವಾಡಿದರೆ ಒಳಿತಾಗದೆಂದು ಭಾವಿಸಿ, ಲಾವಣ್ಯವತಿಯು:—

"ಅವನ ಹೆಸರು ಚಂದ್ರಸೇನ. ಅವನು ನನಗೆ ದೂರಿನ ಆಪ್ತನಿರುವನು ತಂದೆ-ತಾಯಿಗಳನ್ನು ಚಿಕ್ಕಂದಿನಲ್ಲಿಯೇ ಕಳೆದುಕೊಂಡ ಅವನನ್ನು ನನ್ನ ತಂದೆಯು ಸಾಕಿ ಸಲುಹುವನು. ನಾವೀರ್ವರೂ ಬಂಧು-ಭಗಿನಿಯರಾಗಿ ನಡೆದುಕೊಳ್ಳುತ್ತೇವೆ."

"ಅವನಿಗೆ ಚನ್ನಾಗಿ ಗುಣವಾಗುವದಕ್ಕೆ ನಾಲ್ಕಾರು ದಿನಗಳು ಬೇಕು. ಗುಣವಾದೊಡನೆಯೇ ಅವನನ್ನು ನೀನು ಹೇಳಿದಲ್ಲಿಗೆ

ಕಳುಹಿಸುವೆನು.''

"ನನ್ನನ್ನು?" ಎಂದು ಉತ್ಕಂಠೆಯಿಂದ ಲಾವಣ್ಯವತಿಯು ಕೇಳಿದಳು.

"ಲಾವಣ್ಯವತೀ, ಶೋಕ-ಸಂತಾಪದಿಂದ ಬಸವಳಿದು ಬಾಡಿದ ನಿನ್ನ ಅರವಿಂದವದನದಲ್ಲೇ ಈ ಬಗೆಯು ಲಾವಣ್ಯ ವಾಸಿಸಿರುವದು ಅದು ಪೂರ್ಣಾನಂದವಾದಾಗಿನ ದಿವ್ಯಲಾವಣ್ಯವನ್ನಷ್ಟು ಕಣ್ಣಾರೆ ಕಂಡ ಮೇಲೆ ನಿನ್ನನ್ನು ತಂದೆಯು ಬಳಿಗೆ ಕಳಿಸಬೇಕೋ, ಇಲ್ಲವೆ ವಾತಾಪಿಪುರದಲ್ಲಿಯೇ ಇಟ್ಟು ಬಿಡಬೇಕೋ ಎಂಬದನ್ನು ನಿರ್ಧರಿಸುವೆನು." ಎಂದು ಪುಲಿಕೇಶಿಯು ನಗೆಮೊಗದಿಂದ ಅವಳ ಚನ್ನಾದ ಮೊಗದಾವರೆಯನ್ನು ಕಣ್ಣು ತುಂಬಾ ನೋಡುತ್ತ ಆಡಿದನು.

ಪುಲಿಕೇಶಿಯು ಹೀಗೆ ನುಡಿದೊಡನೆಯೆ ಲಾವಣ್ಯವತಿಯು ಅವನ ಮುಖವನ್ನು ಸೂಕ್ಷ್ಮದೃಷ್ಟಿಯಿಂದ ನೋಡಿದಳು. ನಿನ್ನೆಯ ದಿನದ ಅವನ ವರ್ತನದಿಂದಲೂ, ಇಂದಿನ ಅವನ ಮಾತಿನ ಮೇಲಿಂದಲೂ ಅವಳಿಗೆ ತಿಳಿಯಬೇಕಾಗಿದ್ದ ಸಂಗತಿಯು ಗೊತ್ತಾಯಿತು: ಕೂಡಲೆ ಅವಳ ಮನಸ್ಸಿನ ಮೇಲೆ ಆಗಶಕ್ಯ ಪರಿಣಾಮವೂ ಆಯಿತು. ಆದರೂ ಅವಳು ತನ್ನ ಮನಸ್ಸಿನ ಯಾವ ಬಗೆಯ ವಿಕಾರಗಳನ್ನೂ ಮುಖದ ಮೇಲೆ ಬರಗೊಡಲಿಲ್ಲ. ಆಗ ಅವಳು:—

"ಮಹಾಶಯರೇ, ನಿಮ್ಮ ಮಾತಿನ ಮರ್ಮವು ಅಪ್ರಬುದ್ಧಳಾದ ನನಗ ತಿಳಿಯಲೊಲ್ಲದು. ನೀವು ನನ್ನನ್ನು ನನ್ನ ತಂದೆಯ ಬಳಿಗೆ ಸದ್ಯಕ್ಕೆ ಕಳಿಸುವದಿಲ್ಲವೆಂಬ ಅಭಿಪ್ರಾಯದ ಮಾತನಾಡುವಿರಿ ಪರವನಿತೆಯರನ್ನು ಹೀಗೆ ನಿರ್ಬಂಧಿಸುವದು ವಿಶಾಲವಾದ ನಿಮ್ಮ ಕೀರ್ತಿಗೆ ಕಲಂಕಪ್ರದವಲ್ಲವೆ? ಅತಿರೇಕವಾದ ವರ್ಣನೆಯಿಂದ ಈ ಹತಭಾಗಿನಿಯನ್ನು ನಾಚಿಸಬೇಡಿರಿ. ನನ್ನ ಮನೆಗೆ ನನ್ನನ್ನು ಕಳುಹಿಸಿ ದಯಾಘನರೆಂಬ ಪದವಿಯ ಸಾರ್ಥಕತೆ ಮಾಡಿಕೊಳ್ಳಿರಿ."

"ಕುಮಾರೀ, ನಾನು ನಿನ್ನನ್ನು ನಿರ್ಬಂಧಿಸಿರುವೆನೆಂದು ಹೇಗೆ ತಿಳಿದೆ? ನಿನ್ನನ್ನು ಅಭಾಗಿನಿಯೆಂದು ಅದಾರು ಹೇಳುವರು? ನಿನ್ನ

ಸ್ವರ್ಗೀಯ ಸೌಂದರ್ಯವನ್ನು ಯಥಾಸ್ಥಿತವಾಗಿ ವರ್ಣಿಸುವದಕ್ಕೆ ನನ್ನಲ್ಲಿ ಶಬ್ದಗಳಿಲ್ಲವೆಂದು ನಾಚಿಸುವ ಮಾತನಾಡಬೇಡ. ನೀನು ಪರವನಿತೆಯಲ್ಲವೆಂದೇ ಸುಭಗೆಯಾದ ನಿನ್ನ ಭಾಗ್ಯಶಾಲಿನಿಯಾದ ಮುಖದ ಸೌಭಾಗ್ಯಸಿರಿಯನ್ನು ಯಥೇಷ್ಟವಾಗಿ ನೋಡಬೇಕೆಂದು ಬಯಸುವೆನು ನನ್ನ ಬಯಕೆಯಲ್ಲಿ ನಿನ್ನ ಶುಭೋದಯವೇ ಇರುವದರಿಂದ ಅಂತಹ ಭಾಗ್ಯೋದಯ ಕಾಲವನ್ನು ಒದಗಿಸಿಕೊಡುವದು ಕೇವಲ ನಿನ್ನನ್ನೇ ಅವಲಂಬಿಸಿರುವದು. ನಿನ್ನ ಮನೋದಯ ವೇನು?'' ಪುಲಿಕೇಶಿಯು ಹೀಗೆ ನಗೆ ಮೊಗದಿಂದ ಮಾತನಾಡಿದ ಕೂಡಲೆ, ಲಾವಣ್ಯವತಿಯ ಮನಸ್ಸಿನಲ್ಲಿ ಆನಂದೋದಯವಾಯಿತು. ಅವಳು ಕ್ಷಣದ ಹಿಂದೆ ದುಃಖದಿಂದ ಬಳಲುತ್ತಿದ್ದವಳು ಈಗ ಆನಂದಸಾಗರದಲ್ಲಿ ಮುಳುಗಿದಳು ಆಗ ಆವಳು ಬುದ್ಧಿಪೂರ್ವಕವಾಗಿ:

"ಬಂಧನದಲ್ಲಿಂಸಿಲ್ಲವೆಂದು ಬಾಯಿಬಣ್ಣದ ಮಾತನಾಡುತ್ತ ಬಲವಾದ ಪಾಶದಿಂದ ಬಂಧಿಸುವದು ಸಂಭಾವಿತವೇಷದ ಸುಲಿಗೆಗಾರರ ಲಕ್ಷಣವಲ್ಲವೆ?'' ಎಂದು ಲಾವಣ್ಯವತಿಯು ಹಸನ್ಮುಖಿಯಾಗಿ ನುಡಿದಳು. ಅವಳು ಹಳ್ಳಿಯ ಬಿಗಿಯಿಂದ ಇಟ್ಟದ್ದ ಆನಂದಹಾಸ್ಯವು ಹೊರಸೂಸಿ ಹರಿಯತೊಡಗಿತು. ಪುಲಿಕೇಶಿಯು ಅವಳ ಅರವಿಂದ ವದನವನ್ನು ನೋಡಿ:—

"ನನ್ನ ಮನೋಬಯಕೆಯು ಸಫಲವಾಗುತ್ತ ಬಂತು'' ಎಂದು ನುಡಿದು, ನಸುನಗುತ್ತ:— "ಚಂದ್ರಮುಖೀ, ಬಂಧನ-ಬಂಧವಿಮೋಚನಗಳು ಕೇವಲ ಸೌಖ್ಯಕಾರಿ ಇಲ್ಲವೆ ದುಃಖಕಾರಿ ಎಂದು ಹೆಸರಿಡುವದಕ್ಕೆ ಬರುವದಿಲ್ಲ ಒಮ್ಮೊಮ್ಮೆ ಬಂಧನದಿಂದ ಸೌಖ್ಯವು ಲಭಿಸಬಹುದು; ಬಂಧವಿಮೋಚನದಿಂದ ದುಃಖವು ಲಭಿಸಬಹುದು''

"ನನಗಿಂತಹ ಗಹನ ವಿಷಯವು ಅರಿಯದು. ಸ್ಪಷ್ಟ ಮಾತನಾಡಿರಿ. ಶತ್ರುಗಳಾದ ನಿಮ್ಮ ಬಳಿಯಲ್ಲಿ ನಾನು ಅರಕ್ಷಣ ಕೂಡ ಇರಲಾರೆನು.''

"ವಿಜಯಾಂಬಿಕೇ!"

"ಅಲ್ಲಲ್ಲ! ನಾನು ಲಾವಣ್ಯವತಿಯು" ಎಂದು ನುಡಿದು, ನಸು ನಕ್ಕು ಲಾವಣ್ಯವತಿಯು:--"ನಿಮ್ಮ ಬುದ್ಧಿಯನ್ನಷ್ಟು ಸ್ವಾಧೀನ ದಲ್ಲಿಟ್ಟುಕೊಂಡು ಮಾತನಾಡಿರಿ ನಿನ್ನೆ ರಾತ್ರಿಯಲ್ಲಿ ಜಾಗರಣೆ ಯಾಗಿರುವದೇನು?"

"ನಿನಗೆ ಲಾವಣ್ಯವತಿಯಲ್ಲವೆಂದು ಯಾರು ಹೇಳಿದರು? ನೀನು ಲಾವಣ್ಯವತಿಯು; ಅಪ್ರತಿಮ ಲಾವಣ್ಯವತಿಯು; ಅನುಪಮ ಲಾವಣ್ಯವತಿಯು; ದಿವ್ಯಲಾವಣ್ಯವತಿಯು ಲಾವಣ್ಯದ ರಾಶಿಯೇ ಮೂರ್ತಿಮಂತಾಗಿ ಎದುರಿಗಿರುವಾಗ ನೀನು ಲಾವಣ್ಯವತಿಯಲ್ಲ ವೆಂದು ಹೇಳುವವನ ಎದೆಯೇನು? ನೀನಂದಂತೆ ಬುದ್ಧಿಯನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕಾದರೆ, ಅದು ಇದ್ದರಂತೂ ಸರಿ ಬುದ್ಧಿ ಯು ಎಂದೋ ಪರವಶವಾಗಿ, ಅದು ತನ್ನ ಪರವಶತೆಯ ಅನುಕರಣ ಮಾಡುವದಕ್ಕೆ ನನ್ನನ್ನು ತೊಡಗಿಸಿದ್ದರಿಂದ, ನೀನಾಡಿದಂತೆ ಜಾಗ ರಣೆಯು ಫಲವಾದರೂ ಲಭಿಸಿತು. ಹೀಗಿದ್ದರೂ ನಾನು ನಿನ್ನನ್ನು ಅನ್ವರ್ಥಕನಾಮದಿಂದಲೆ ಸಂಬೋಧಿಸಿದೆನು. ನನ್ನ ಈ ಸಂಬೋ ಧನದಲ್ಲಿಯೂ ನನಗೆ ಸ್ವಲ್ಪ ಅನುಮಾನವು ಬಾಧಿಸತೊಡಗಿದೆ"

"ಅದೇನು-ಅದೇನು? ವಾಕ್ಚತುರರಾದ ನಿಮ್ಮ ಮಾತುಗಳು ಎಷ್ಟು ರಸಾಲವೋ, ಅಷ್ಟೇ ಆನಂದದಾಯಕವಿರುತ್ತವೆ" ಎಂದು ಉತ್ಕಂಠೆಯಿಂದ ಲಾವಣ್ಯವತಿಯು ಕೇಳಿದಳು

"ರೇವತಿದ್ವೀಪದ ವಿಜಯದಲ್ಲಿ ಲಭಿಸಿದಳೆಂದು ನಿನಗೆ 'ವಿಜ ಯಾಂಬಿಕೆ' ಎಂಬ ಹೆಸರು ಬಂದಿತೋ, ಅಂತಹ ವಿಜಯವನ್ನು ಸಂಪಾದಿಸಿದವನನ್ನು ಜಯಿಸಿ, ವಿಜಯಶಾಲಿನಿಯಾಗಿರುವೆಯೆಂದು ಈ ಹೆಸರು ಪ್ರಾಪ್ತವಾಯಿತೋ ಎಂಬದನ್ನು ನಿನ್ನಿಂದಲೇ ತಿಳಿದು ಕೊಳ್ಳಬೇಕಾಗಿದೆ ನನ್ನ ಮನಸ್ಸಿನ ಸಂಶಯವನ್ನು ನಾನೇ ನಿವಾ ರಿಸಿಕೊಳ್ಳುತ್ತಿದ್ದೆನು; ಆದರೂ ಬುದ್ಧಿಪರವಶತೆಯ ದೋಷವು ನನ್ನನ್ನು ತಟ್ಟಿರುವದೆಂದು ಆಗಲೆ ಹೇಳಲಿಲ್ಲವೆ? ಅಂತೆಯೇ ದ್ವಿಗು

ಣಿತ ಬುದ್ಧಿಯುವಳಾದ ನಿನ್ನನ್ನು ವಿಚಾರಿಸಿದೆನು.''

''ಒಳ್ಳೆಯ ವಾಕ್ಚಾತುರ್ಯವಿದು! ಅಂತೂ ಸ್ತ್ರೀಯರನ್ನು ಮೋಹಪಾಶದಿಂದ ಬಿಗಿಯುವ ಕಲೆಯು ನಿಮಗೆ ಚನ್ನಾಗಿ ಅವಗತ ವಿರುವದೆಂಬಂತೆ ತೋರುತ್ತದೆ ನಿಮ್ಮ ಮನಸ್ಸಿನ ಹರಿಯು ಈಗ ತಿಳಿಯಿತು. ಶತ್ರುಭಾವದಲ್ಲಿ ಪ್ರೇಮವು ಪ್ರಾದುರ್ಭವಿಸುವದೆಂದರೆ, ಉಸುಕಿನಲ್ಲಿ ಎಣ್ಣೆ ಹೊರಟಷ್ಟು ಆಶ್ಚರ್ಯಕಾರಕವಿರುವದು. ಚಂಚಲಮನಸ್ಸಿನ ತರುಣರ ಲಹರಿಗೀಡಾಗಿ ಮೋಸ ಹೋಗಲಾರೆನು. ಇನ್ನು ವಂಚನೆಯ ಮಾತೇ ಬೇಡ. ನನ್ನನ್ನು ಮುಕ್ತಮಾಡಿ ಪುಣ್ಯ ಕಟ್ಟಿಕೊಳ್ಳಿರಿ'' ಎಂದು ಲಾವಣ್ಯವತಿಯು ಬುದ್ಧಿಪುರಸ್ಸರವಾಗಿ ನುಡಿದು, ಪುಲಿಕೇಶಿಯ ಮುಖವನ್ನು ಎವೆಯಿಕ್ಕದೆ ನೋಡಹತ್ತಿದಳು. ಆಗ ಅವಳು ಸ್ವಲ್ಪ ಕೈಗಡದ ಸಿಟ್ಟನ್ನು ಬಲುಮೆಯಿಂದ ಮುಖದ ಮೇಲೆ ತೊಡೆದುಕೊಂಡಿದ್ದಳು.

''ಗುಣ-ರೂಪ-ಯೌವನ ಸಂಪನ್ನರಾದ ಕುಮಾರಿಯರ ಸಹವಾಸದಿಂದ ಶತ್ರುಭಾವವು ಹೇಳಹೆಸರಿಲ್ಲದಂತಾಗುವದು ಚಂದ್ರ ಕಿರಣಗಳ ಸಮಾಗಮವಾದೊಡನೆಯೇ ಚಂದ್ರಕಾಂತಶಿಲೆಯು ದ್ರವಿಸುವದಿಲ್ಲವೆ? ಸ್ತ್ರೀ-ಪುರುಷರಲ್ಲಿ ಚಾಂಚಲ್ಯವು ಬೇಕೇಬೇಕು ಸೌದಾಮಿನಿಯು ಚಂಚಲತ್ವವನ್ನು ತಳೆಯದಿದ್ದರೆ, ಮೇಘಗಳು ದ್ರವಿಸುವದು ಹೇಗೆ? ಲಾವಣ್ಯವತಿಯಾದ ವಿಜಯಾಂಬಿಕೇ! ನಿನ್ನನ್ನು ಮುಕ್ತಳನ್ನಾಗ ಮಾಡಬೇಕಂದೇ ನನ್ನ ಸದಿಚ್ಛೆಯಿರುವದು''

''ಹಾಗಿದ್ದರೆ ಇಷ್ಟೇಕೆ ದ್ರಾವಿಡೀ ಪ್ರಾಣಾಯಾಮವು?''

''ಹೌದು. ಕೌಮಾರ್ಯದಿಂದ ಮುಕ್ತಳಾಗಬೇಕಾದರೆ, ಇಷ್ಟು ಪ್ರಾಣಾಯಾಮ ಪುರಶ್ಚರಣಗಳಿರದಿದ್ದರೆ ಹೇಗೆ?''

''ಸರಿ-ಸರಿ! ನಿಮ್ಮೊಡನೆ ಮಾತನಾಡಿ ಪಾರಾಗುವದು ಬಹು ಕಷ್ಟ!'' ಎಂದು ಲಾವಣ್ಯವತಿಯು ಮಂದಹಾಸದಿಂದ ನುಡಿದು:—

''ನಿಮ್ಮ ಮನೋಗತವು ಸಫಲವಾಗುವಂತಿಲ್ಲವೆಂದು ನನಗೆ ದುಃಖವೆನಿಸಿದೆ.''

'ಅದೇಕೆ?'ಎಂದು ಆತುರತೆಯಿಂದ ಪುಲಿಕೇಶಿಯು ಕೇಳಿದನು.

"ನಾನು ಪರತಂತ್ರಳಿರುವೆನು ತಂದೆ-ತಾಯಿಗಳ ಮನಸ್ಸಿನಂತೆ ನಡೆದುಕೊಳ್ಳುವದು ನಿಜವಾದ ಪುತ್ರಧರ್ಮವೆಂಬದನ್ನು ಧರ್ಮಭಾವನಾಯುತರಾದ ತಮಗೆ ಹೇಳಲಿಕ್ಕೆ ಬೇಡ. ಸ್ತ್ರೀಯರು ಕಡೆತನಕ ಪರತಂತ್ರರೇ ಅಲ್ಲವೇ?"

"ನಿಜವು. ನಿನ್ನ ಧರ್ಮಶಾಸ್ತ್ರದಲ್ಲಿ ಹಾಗೆ ನಿಯಮ ಹೇಳಿ, ಅದಕ್ಕೆ ಅಪವಾದವು ನನ್ನ ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು. ಪರತಂತ್ರ-ಪರತಂತ್ರರಲ್ಲಿ ಪ್ರೇಮಮಿಲನವಾಗುವದಕ್ಕೆ ಯಾವ ತಂತ್ರಗಳ ಅವಶ್ಯಕತೆಯೂ ಇಲ್ಲವಂತೆ! ವಿಜಯಿವೀರನ ಮೇಲೆ ವಿಜಯವನ್ನು ಸಾರಿದ ವಿಜಯಾಂಬಿಕೆಯು ನನ್ನನ್ನು ಪೂರಾ ಪರತಂತ್ರ ಮಾಡಿರುವಳು! ಯಾಕೆ? ಇನ್ನು ಮೇಲೆ ಅಡ್ಡಿಯೇನು? ಲಾವಣ್ಯವತೀ, ಇನ್ನೂ ನನ್ನನ್ನು ಎಷ್ಟು ಬಗೆಯಿಂದ ಪರೀಕ್ಷಿಸಬೇಕೆನ್ನುವೆ? ಹೇಳು, ನಿನ್ನ ಮನೋದಯವನ್ನು ಸ್ಪಷ್ಟವಾಗಿ ಹೇಳು."

ಪುಲಿಕೇಶಿಯ ಮಾತುಗಳನ್ನು ಕೇಳಿ, ಅವಳ ನಗೆಮೊಗವು ನಾಚಿಕೆಯ ಭಾರದಿಂದ ಬಾಗಿತು. ಮನಸ್ಸಿನಲ್ಲಿಯ ಆನಂದಲಹರಿಯಿಂದ ಕಂಠವು ಬಿಗಿದು, ಮಾತುಗಳು ಹೊರಡದಾದವು ಯೋಗ್ಯವಯಸ್ಕನೂ, ಗುಣಯುತನೂ, ಚೆನ್ನಿಗನೂ ಆದ ಸಾರ್ವಭೌಮ ರಾಜನನ್ನು ವರಿಸುವದಕ್ಕೆ ಸುಶೀಲೆಯೂ ವಿಚಾರಿಯೂ ಆದ ಕುಮಾರಿಯು ಅನುಮಾನಿಸುವಳೇಕೆ? ಆನಂದೋದ್ರೇಕದಿಂದ ಅವಳ ಬಾಯಿಯಿಂದ ಮಾತುಗಳು ಹೊರಡದೆ, ಮೌನದಿಂದಿದ್ದರೂ ಅವಳ ಮುಖವು ಹಿಡಂಬಡಿಕೆಯ ನಿಶಾನೆಯನ್ನು ಧರಿಸಿತ್ತು. ಪುಲಿಕೇಶಿಗೆ ಸ್ಪಷ್ಟೋಕ್ತಿಗಳ ಅವಶ್ಯಕತೆಯೂ, ಆತುರತೆಯೂ ಇದ್ದುದರಿಂದ ಅವನು:—

"ಲಾವಣ್ಯಮಯಿ, ಮಾತನಾಡದಿದ್ದರೆ ಮನೋಗತವು ತಿಳಿಯುವ ಬಗೆ ಹೇಗೆ?"

"ನಾನು ಏನು ಮಾತನಾಡಲಿ?"

"ಪ್ರಿಯೇ!"

"ಏನಿದು ಉದ್ದಾಮತನವು?"

"ನೀನೇ ನನ್ನನ್ನು ಉದ್ದಾಮವೃತ್ತಿಗೆ ಹಚ್ಚಿದೆ. ಅದಕ್ಕೆ ದಂಡನೆಯಾದರೂ ನಿನ್ನಿಂದಲೇ ದೊರೆಯತಕ್ಕದ್ದು. ಅಂತಹ ದಂಡನೆಯನ್ನು ನಾನೂ ಇಚ್ಛಿಸುತ್ತಲಿರುವೆನು."

"ನಾಥಾ!............"

"ಇದೇ ದಂಡನೆಯು!" ಎಂದು ನುಡಿದವನೇ ಪುಲಿಕೇಶಿಯು ತನ್ನ ಬಾಹುಪಾಶಗಳಿಂದ ಅವಳನ್ನು ಬಿಗಿದನು! ಲಾವಣ್ಯವತಿಯು ತನ್ನ ಬಾಹುಗಳನ್ನು ಅವನ ಕೊರಳಿಗೆ ಹಾಕಿ ಹಾಸ್ಯಮುಖದಿಂದ:

"ಪ್ರಿಯರೇ, ನಿಮ್ಮ ಪ್ರೇಮವು ದೃಢವೇ?"

"ದೃಢವು; ಅಚಲವು; ನನ್ನ ಪ್ರೇಮವು ಮೇರುಗಿರಿಯಂತೆ ಅಚಲವೂ, ಗಂಗಾಜಲದಂತೆ ನಿರ್ಮಲವೂ ಇರುತ್ತದೆ. ಪ್ರಾಣೇಶ್ವರಿ, ನಿನ್ನ ಹೃದಯಮಂದಿರದಲ್ಲಿ ನನ್ನ ಪ್ರೇಮಕ್ಕೆ ಇಂಬುಗೊಟ್ಟೆಯಾ?"

"ನಾಥರೆ, ಕುಲೀನ ಯುವತಿಯರ ಪ್ರೇಮವು ಅಚಲವಿರುತ್ತದೆ. ಯಾವ ಕಾರಣದಿಂದಲೂ ಅದಕ್ಕೆ ಬಾಧೆ ಬರುವದಿಲ್ಲ. ನೀವು ಈಗಲೇ ಚನ್ನಾಗಿ ವಿಚಾರಿಸಿರಿ ನಿಮ್ಮ ಶಕ್ಯಂದಿರ ಸ್ವಭಾವವು ವಿಚಿತ್ರವಾದದ್ದೆಂದು ಕೇಳಿರುವೆನು. ಶತ್ರುವಿನ ಪುತ್ರಿಯೆಂದು ನಿರಾಕರಿಸಿದರೆ, ಕಠಿಣವಾದೀತು?"

"ಹಾಗಾದಪಕ್ಷದಲ್ಲಿ ಗತಿಯೇನು?" ಪುಲಿಕೇಶಿಯು ಬೇಕೆಂದು ಹೀಗೆ ನುಡಿದ ಕೂಡಲೆ ಲಾವಣ್ಯವತಿಯು ಹೌಹಾರಿದಳು; ಆದರೂ ಅವಳು ಧೈರ್ಯ ತಾಳಿ:—"ಗತಿಯೇನೆಂದು ಕೇಳಿದರೆ ನಾನೇನು ಹೇಳಲಿ? ವಂಚಕತ್ವ ಮಾಡಿದವರಿಗುಂಟಾಗುವ ಗತಿಯೇ ಗತಿ. ನನಗೆ ಮಾತ್ರ ಆಜೀವ ನಿಮ್ಮ ನಾಮಸ್ಮರಣೆಯೇ ಗತಿ!" ಎಂದು ಲಾವಣ್ಯವತಿಯು ಖಿನ್ನವದನೆಯಾಗಿ ನುಡಿದಳು ಅವಳ ಕೋಮಲ ಹೃದಯದ ಪಡಿಕಟ್ಟನ್ನು ನೋಡಿ ಪುಲಿಕೇಶಿಗೆ ದುಃಖ-ಆನಂದಗಳು ಹಿಮ್ಮೇಲೆ ಹುಟ್ಟಿದವು. ಅವನು ನಸುನಗುತ್ತ ಅವಳ ಗಲ್ಲ ಹಿಡಿದು:

"ಪ್ರಿಯೇ, ನೀನು ಚಿಂತಿಸಬೇಡ. ಎಂತಹ ಕಾರಣದಿಂದಲಾದರೂ ನನ್ನ ನಿಶ್ಚಯವು ಬೇರೆಯಾಗಲಿಕ್ಕಿಲ್ಲ. ಈ ಮಾತಿಗೆ ನನ್ನ ಹೃದಯಸ್ಥ ಪರಮಾತ್ಮನೇ ಸಾಕ್ಷಿ! ಈಗಲಾದರೂ ನಿನಗೆ ನಂಬಿಗಯುಂಟಾಯಿತೆ?"

ದೂರ ಸರಿದು ನಿಂತ ಲಾವಣ್ಯವತಿಯು ಧಾವಿಸಿ ಬಂದು, ಪುಲಿಕೇಶಿಯನ್ನು ಆಲಿಂಗಿಸಿದಳು. ಅವನು ಅವಳನ್ನು ಬಿಗಿದಪ್ಪಿ ಮೆಲ್ಲನೆ ಚುಂಬಿಸಿದನು ಅವಳು ಆನಂದಭರಿತಳಾಗಿ ನಗೆಮೊಗದಿಂದ:

"ಅವ್ವಯ್ಯಾ! ಈಗಲೆ ದಂಡನೆಗೆ ಪ್ರಾರಂಭವಾಯಿತಲ್ಲ!"

ಸ್ತ್ರೀಯರನ್ನು ಬಾಹುಪಾಶದಿಂದ ಬಂಧಿಸುತ್ತಲೂ, ಚುಂಬನದಿಂದ ದಂಡಿಸುತ್ತಲೂ ಇದ್ದರೇನೇ ಅವರು ಮಾಂಡಲಿಕತ್ವವನ್ನು ವಹಿಸಿ, ಪುರುಷ ಸಮ್ರಾಟನಿಗೆ ಪ್ರೇಮದ ಕಾಣಿಕೆಯನ್ನು ವೇಳೆ ವೇಳೆಗೆ ಕೊಡುತ್ತಾರೆಂದು ವಾತ್ಸ್ಯಾಯನ ಋಷಿಗಳು ತಮ್ಮ ಶಾಸ್ತ್ರದಲ್ಲಿ ಬರೆದಿಟ್ಟಿರುವರು."

"ಭಲೆ-ಭಲೆ! ಅದಾವ ಶಾಸ್ತ್ರವು?" ಲಾವಣ್ಯವತಿಯು ನಗುತ್ತಲೆ ಕೇಳಿದಳು

"ಕಾಮಶಾಸ್ತ್ರ!!!"

"ಸ್ಸೆ-ಸ್ಸೆ! ಅದರಲ್ಲಿ ಹಿಳ್ಳೆಯ ನೈಪುಣ್ಯವನ್ನು ಸಂಪಾದಿಸಿದಂತೆ ತೋರುವದು. ಪ್ರಿಯಕರಾ, ನಾನು ಭಾಗ್ಯಶಾಲಿನಿಯೆಂದೇ ಅಂತಹನನ್ನು ವರಿಸುವ ಸಂಯೋಗವು ಲಭಿಸಿತು"

"ಪ್ರಾಣೇಶ್ವರೀ!"

"ಪ್ರಾಣಕಾಂತಾ!"

"ನೀನು ನನ್ನವಳಾದೆಯಲ್ಲವೆ? ನಾಚದೆ ಹಿಮ್ಮೆ ಬಾಯಿಬಿಚ್ಚಿ ಹೇಳಿ, ಕರ್ಣಾನಂದವನ್ನುಂಟು ಮಾಡು. ನಿನ್ನ ಹೃದಯಚಿತ್ರವು ನಿರ್ಮಲವೂ, ದೃಢವಾದದ್ದೂ ಎಂಬದು ನನ್ನ ಮನವರಿಕೆಯಾಗಿದ್ದರೂ, ನಿನ್ನ ಬಾಯಿಯಿಂದ ಈ ಅಮೃತಪೂರಿತವಾಣಿಯು ಹೊರಡಬೇಕೆಂದು ಮನಸ್ಸು ಹಾತೊರೆಯುತ್ತದೆ."

ಪುಲಿಕೇಶಿಯು ಮಾತುಗಳನ್ನು ಕೇಳಿ, ಲಾವಣ್ಯವತಿಯು ಗಹ ಗಹಿಸಿ ನಕ್ಕಳು. ಪರಕ್ಷಣದಲ್ಲಿ ಲಜ್ಜೆಯಿಂದ ತಲೆಬಾಗಿಸಿದಳು. ಅದನ್ನು ನೋಡಿ ಅವನು ಆತುರದಿಂದ:—

"ವಿಜಯಾಂಬಿಕೇ!"

"ಯಾಕೆ ನಾಥಾ!"

"ಹೇಳುವದಿಲ್ಲವೇ, ನೀನು ನನ್ನವಳಾದೆಯೆಂದು?"

"ಹೃದಯೇಶ್ವರಾ! ನಾನು ನಿಜವಾಗಿಯೂ ನಿಮ್ಮವಳು!"

---

## ವಿಷಬೀಜಾರೋಪಣ!

ವಿಕ್ರಮಾರ್ಜಿತ ಕೀರ್ತಿಸಂಪನ್ನನಾದ ಮಂಗಳೇಶನು ರೇವತೀ ದ್ವೀಪದಲ್ಲಿ ವಿಜಯ ಸಂಪಾದನೆ ಮಾಡಿಕೊಂಡು ಅತ್ಯಂತ ಉತ್ಸವ ದಿಂದ ವಾತಾಪಿಪುರಕ್ಕೆ ಬಂದನು. ಬುದ್ಧರಾಜನ ಎಲ್ಲ ರಾಜ್ಯ ವನ್ನು ಸ್ವವಶ ಮಾಡಿಕೊಂಡು, ಅವನನ್ನು ರಸಾತಳಕ್ಕೆ ತುಳಿಯಬೇ ಕೆಂಬ ಮಹತ್ವಾಕಾಂಕ್ಷೆಯು ಅವನಲ್ಲಿ ವಾಸವಾಗಿತ್ತು. ಅಮಾನು ಷವಾದ ಕ್ರೂರ್ಯಗತನದಿಂದ ಸ್ವಾಮಿರಾಜನ ವಧೆ ಮಾಡಿಸಿದ್ದರೂ ಅವನ ಮಗನಾದ ವೀರಸೇನನನ್ನು ಹಿಡಿದು ಬಂಧನೆಯಲ್ಲಿಡುವ ವರೆಗೆ ಅವನ ಮನಸ್ಸಿನ ತಳಮಳವು ಶಾಂತವಾಗುವಂತಿದ್ದಿಲ್ಲ. ಪುಲಿಕೇಶಿಯು ಶತ್ರುಪುತ್ರಿಯಾದ ವಿಜಯಾಂಬಿಕೆಯಲ್ಲಿ ಅನುರಾಗ ತಾಳಿ ಅವಳನ್ನು ವರಿಸಬೇಕೆಂದು ಮನಸ್ಸು ಮಾಡಿದುದು ಅವನ ಮನಸ್ಸಿಗೆ ಬಂದಿದ್ದಿಲ್ಲ. ಒಂದುವೇಳೆ ಪುಲಿಕೇಶಿಯು ಅವಳನ್ನು ವಿವಾಹವಾದರೆ, ಉತ್ತರಾ ಪಥದ ದಿಗ್ವಿಜಯಕ್ಕೆ ವಿಘ್ನವುಂಟಾಗುವದೆಂದೂ, ತನ್ನ ದ್ರೋಹಚಿಂ ತನೆ ಮಾಡತೊಡಗಿರುವ ಬುದ್ಧರಾಜನ ಸ್ನೇಹ ಬಳೆಯಿಸುವದರಿಂದ ಮುರವತ್ತಿಗೆ ಶಿಲುಕಿ, ಅವನಿಂದ ಕಸಿದುಕೊಂಡ ರಾಜ್ಯವನ್ನು ತಿರುಗಿ ಕೊಡಬೇಕಾಗುವದೆಂದೂ ಅವನು ಮಿಡುಕತೊಡಗಿದನು; ಆದರೆ ಪುಲಿಕೇಶಿಯ ಮನಸ್ಸಿನ ವಿರುದ್ಧ ಮಾತನಾಡುವದಕ್ಕೆ ಅಷ್ಟೊಂದು

"ಪ್ರಿಯೇ, ನೀನು ಚಿಂತಿಸಬೇಡ. ಎಂತಹ ಕಾರಣದಿಂದಲಾದರೂ ನನ್ನ ನಿಶ್ಚಯವು ಬೇರೆಯಾಗಲಿಕ್ಕಿಲ್ಲ. ಈ ಮಾತಿಗೆ ನನ್ನ ಹೃದಯಸ್ಥ ಪರಮಾತ್ಮನೇ ಸಾಕ್ಷಿ! ಈಗಲಾದರೂ ನಿನಗೆ ನಂಬಿಗೆಯುಂಟಾಯಿತೆ?"

ದೂರ ಸರಿದು ನಿಂತ ಲಾವಣ್ಯವತಿಯು ಧಾವಿಸಿ ಬಂದು, ಪುಲಿಕೇಶಿಯನ್ನು ಆಲಿಂಗಿಸಿದಳು. ಅವನು ಅವಳನ್ನು ಬಿಗಿದಪ್ಪಿ ಮೆಲ್ಲನೆ ಚುಂಬಿಸಿದನು ಅವಳು ಆನಂದಭರಿತಳಾಗಿ ನಗೆಮೊಗದಿಂದ:

"ಅವ್ವಯ್ಯಾ! ಈಗಲೆ ದಂಡನೆಗೆ ಪ್ರಾರಂಭವಾಯಿತಲ್ಲ!"

ಸ್ತ್ರೀಯರನ್ನು ಬಾಹುಪಾಶದಿಂದ ಬಂಧಿಸುತ್ತಲೂ, ಚುಂಬನದಿಂದ ದಂಡಿಸುತ್ತಲೂ ಇದ್ದರೇನೇ ಅವರು ಮಾಂಗಲಿಕತ್ವವನ್ನು ವಹಿಸಿ, ಪುರುಷ ಸಮ್ರಾಟನಿಗೆ ಪ್ರೇಮದ ಕಾಣಿಕೆಯನ್ನು ವೇಳೆ ವೇಳೆಗೆ ಕೊಡುತ್ತಾರೆಂದು ವಾತ್ಸ್ಯಾಯನ ಋಷಿಗಳು ತಮ್ಮ ಶಾಸ್ತ್ರದಲ್ಲಿ ಬರೆದಿಟ್ಟಿರುವರು."

"ಭಲೆ-ಭಲೆ! ಅದಾವ ಶಾಸ್ತ್ರವು?" ಲಾವಣ್ಯವತಿಯು ನಗುತ್ತಲಿ ಕೇಳಿದಳು

"ಕಾಮಶಾಸ್ತ್ರ!!!"

"ಸೈ-ಸೈ! ಅದರಲ್ಲಿ ಒಳ್ಳೆಯ ನೈಪುಣ್ಯವನ್ನು ಸಂಪಾದಿಸಿದಂತೆ ತೋರುವದು. ಪ್ರಿಯಕರಾ, ನಾನು ಭಾಗ್ಯಶಾಲಿನಿಯೆಂದೇ ಅಂತಹನನ್ನು ವರಿಸುವ ಸಂಯೋಗವು ಲಭಿಸಿತು"

"ಪ್ರಾಣೇಶ್ವರೀ!"

"ಪ್ರಾಣಕಾಂತಾ!"

"ನೀನು ನನ್ನವಳಾದೆಯಲ್ಲವೆ? ನಾಚದೆ ಒಮ್ಮೆ ಬಾಯಿಬಿಚ್ಚಿ ಹೇಳಿ, ಕರ್ಣಾನಂದವನ್ನುಂಟು ಮಾಡು. ನಿನ್ನ ಹೃದಯಚಿತ್ರವು ನಿರ್ಮಲವೂ, ದೃಢವಾದದ್ದೂ ಎಂಬದು ನನ್ನ ಮನವರಿಕೆಯಾಗಿದ್ದರೂ, ನಿನ್ನ ಬಾಯಿಯಿಂದ ಈ ಅಮೃತಪೂರಿತವಾಣಿಯು ಹೊರಡಬೇಕೆಂದು ಮನಸ್ಸು ಹಾತೊರೆಯುತ್ತದೆ."

ಪುಲಿಕೇಶಿಯು ಮಾತುಗಳನ್ನು ಕೇಳಿ, ಲಾವಣ್ಯವತಿಯು ಗಹ ಗಹಿಸಿ ನಕ್ಕಳು. ಪರಕ್ಷಣದಲ್ಲಿ ಲಜ್ಜೆಯಿಂದ ತಲೆಬಾಗಿಸಿದಳು. ಅದನ್ನು ನೋಡಿ ಅವನು ಆತುರದಿಂದ:—

"ವಿಜಯಾಂಬಿಕೇ!"

"ಯಾಕೆ ನಾಥಾ!"

"ಹೇಳುವದಿಲ್ಲವೇ, ನೀನು ನನ್ನವಳಾದೆಯೆಂದು?"

"ಹೃದಯೇಶ್ವರಾ! ನಾನು ನಿಜವಾಗಿಯೂ ನಿಮ್ಮವಳು!"

---

## ವಿಷಬೀಜಾರೋಪಣ!



ವಿಕ್ರಮಾರ್ಜಿತ ಕೀರ್ತಿಸಂಪನ್ನನಾದ ಮಂಗಳೇಶನು ರೇವತೀ ದ್ವೀಪದಲ್ಲಿ ವಿಜಯ ಸಂಪಾದನೆ ಮಾಡಿಕೊಂಡು ಅತ್ಯಂತ ಉತ್ಸವ ದಿಂದ ವಾತಾಪಿಪುರಕ್ಕೆ ಬಂದನು. ಬುದ್ಧರಾಜನ ಎಲ್ಲ ರಾಜ್ಯ ವನ್ನು ಸ್ವವಶ ಮಾಡಿಕೊಂಡು, ಅವನನ್ನು ರಸಾತಳಕ್ಕೆ ತುಳಿಯಬೇ ಕೆಂಬ ಮಹತ್ವಾಕಾಂಕ್ಷೆಯು ಅವನಲ್ಲಿ ವಾಸವಾಗಿತ್ತು. ಅಮಾನು ಷವಾದ ಕ್ರೂರತನದಿಂದ ಸ್ವಾಮಿರಾಜನ ವಧೆ ಮಾಡಿಸಿದ್ದರೂ ಅವನ ಮಗನಾದ ವೀರಸೇನನನ್ನು ಹಿಡಿದು ಬಂಧನೆಯಲ್ಲಿಡುವ ವರೆಗೆ ಅವನ ಮನಸ್ಸಿನ ತಳಮಳವು ಶಾಂತವಾಗುವಂತಿದ್ದಿಲ್ಲ. ಪುಲಿಕೇಶಿಯು ಶತ್ರುಪುತ್ರಿಯಾದ ವಿಜಯಾಂಬಿಕೆಯಲ್ಲಿ ಅನುರಾಗ ತಾಳಿ ಅವಳನ್ನು ವರಿಸಬೇಕೆಂದು ಮನಸ್ಸು ಮಾಡಿದ್ದು ಅವನ ಮನಸ್ಸಿಗೆ ಬಂದಿದ್ದಿಲ್ಲ. ಹಿಂದುವೇಳೆ ಪುಲಿಕೇಶಿಯು ಅವಳನ್ನು ವಿವಾಹವಾದರೆ, ಉತ್ತರಾ ಪಥದ ದಿಗ್ವಿಜಯಕ್ಕೆ ವಿಘ್ನವುಂಟಾಗುವದೆಂದೂ, ತನ್ನ ದ್ರೋಹಚಿಂ ತನೆ ಮಾಡಹತ್ತಿರುವ ಬುದ್ಧರಾಜನ ಸ್ನೇಹ ಬಳೆಯಿಸುವದರಿಂದ ಮುರವತ್ತಿಗೆ ಶಿಲುಕಿ, ಅವನಿಂದ ಕಸಿದುಕೊಂಡ ರಾಜ್ಯವನ್ನು ತಿರುಗಿ ಕೊಡಬೇಕಾಗುವದೆಂದೂ ಅವನು ಮಿಡುಕಹತ್ತಿದನು; ಆದರೆ ಪುಲಿಕೇಶಿಯ ಮನಸ್ಸಿನ ವಿರುದ್ಧ ಮಾತನಾಡುವದಕ್ಕೆ ಅಷ್ಟೊಂದು

ಸಾಹಸ ಮಾಡಲು ಮನಸ್ಸುಳ್ಳವನಾಗಿರಲಿಲ್ಲ. ದುರ್ಲಭದೇವಿಯಾದರೂ ಪುಲಿಕೇಶಿಗೆ ಅನುರೂಪಳಾದ ಕನ್ಯೆಯು ದೊರಕಿದಳೆಂದು ಆನಂದಭರಿತಳಾಗಿ ಅವರೀರ್ವರ ವಿವಾಹಕ್ಕೆ ಸಮ್ಮತಿಯುನ್ನು ವ್ಯಕ್ತಪಡಿಸಿದ್ದಳು. ಮಂತ್ರಿ-ಸೇನಾನಾಯಕ ಮಂಡಲವಾದರೂ ಅದಕ್ಕೆ ಹೊರತಾಗಿರಲಿಲ್ಲ. ಇಷ್ಟೆಲ್ಲ ಜನರ ಮನಸ್ಸನ್ನು ಮುರಿದು, ತನ್ನದೇ ಆಧ್ಯತೆಯುನ್ನು ಬೆಳೆಯಿಸಬೇಕಾದರೆ, ಮನಸ್ಸು ಅಷ್ಟೊಂದು ಸಬಲವಿಲ್ಲದಿದ್ದರೆ ಹೇಗೆ?

ಪುಲಿಕೇಶಿಯು ಏಳ್ಗೆಯುನ್ನೂ, ದಿನದಿನಕ್ಕೆ ಬೆಳೆಯುತ್ತಿರುವ ಅವನ ಕೀರ್ತಿಯುನ್ನೂ, ಅವನಲ್ಲಿ ಸ್ವಭಾವಸಿದ್ಧವಾಗಿ ವಾಸಿಸಿದ ಸದ್ಗುಣಗಳನ್ನೂ ನೋಡಿ, ಸಾಮ್ರಾಜ್ಯದೊಳಗಿನ ಪ್ರಜಾಜನರು ಅವನನ್ನು ಹಾಡಿ ಹರಸುತ್ತಿದ್ದರು ಅವನನ್ನು ನೀರಿನಲ್ಲಿ ನೋಡುತ್ತಿರುವ ಮತ್ಸರಗ್ರಸ್ತ ಪಿಶಾಚಿಯು ಇಡಿಯ ಸಾಮ್ರಾಜ್ಯದಲ್ಲಿ ಒಂದೇ ಒಂದಾಗಿತ್ತು ಅದಾವದೆಂದರೆ ಮಂಗಳೇಶನ ಧರ್ಮಪತ್ನಿಯಾದ ವಿನಯಾಂಬಿಕೆಯು! ವಿನಯಾಂಬಿಕೆಯು ಹೆಸರಿಗೆ ತಕ್ಕಂತೆ ವಿನಯಶೀಲಳಿರದೆ, ಪರಮಾವಧಿ ದುಃಶೀಲಳಿದ್ದಳು. ಗಂಡನಿಕ್ಕೆ ಹಗ್ಗ ಹಾಕಿ ಅಲ್ಲಾಡಿಸಬೇಕೆಂದು ಅವಳ ದೀರ್ಘವಾದ ಆಕಾಂಕ್ಷೆಯು ಇತ್ತು ತಿಲೋತ್ತಮೆ-ಮೇನಕೆಯುರನ್ನು ನಾಚಿಸುವ ಸ್ವರ್ಗಾಂಗನೆಯು ಪುಲಿಕೇಶಿಗೆ ಮಾಲೆಯುನ್ನು ಹಾಕಲುದ್ಯುಕ್ತಳಾದದ್ದೂ, ಅವನು ದಿನೇ-ದಿನೇ ರಾಜ್ಯಕಾರಭಾರದಲ್ಲಿ ಹೆಚ್ಚು ಹೆಚ್ಚಾಗಿ ಕೈ ಹಾಕತೊಡಗಿದ್ದೂ ಅವಳಿಗೆ ಸಹನವಾಗಲಿಲ್ಲ ಅದದ್ದನ್ನು ನೋಡುತ್ತ ಸ್ವಸ್ಥವಾಗಿ ಕುಳಿತುಬಿಟ್ಟರೆ, ರಾಜ್ಯವೆಲ್ಲ ಪುಲಿಕೇಶಿಯ ಪಾಲಾಗಿ ತನ್ನ ಪುತ್ರನಾದ ಇಂದ್ರವರ್ಮನು ರಾಜ್ಯಪದಕ್ಕೆ ಪೂರ್ಣವಾಗಿ ಎರವಾಗುವನೆಂದು ಅವಳ ಮನವರಿಕೆಯಾಗಿತ್ತು. ಕೈಲಾದಮಟ್ಟಿಗೆ ಪ್ರಯತ್ನ ಮಾಡಿ ತನ್ನ ಪತಿಗೆ ಪಟ್ಟಕ್ಕೆ ಕುಳಿತುಕೊಳ್ಳುವದಕ್ಕೆ ಹೇಳಬೇಕೆಂದು ಅವಳು ನಿರ್ಧರಿಸಿಕೊಂಡಿದ್ದಳು ತನ್ನ ಪತಿಯು ಸಾಮರ್ಥ್ಯದಿಂದ ಚಾಲುಕ್ಯ ಸಾಮ್ರಾಜ್ಯದ ಪುನಃ ಪ್ರಾಣಪ್ರತಿಷ್ಠೆಯಾಗಿ ಅದು ಇಷ್ಟು ಉನ್ನತಿಗೆ

ಬಂದಿತೆಂದೂ, ಇಲ್ಲದಿದ್ದರೆ ಅದು ಹೇಳಹೆಸರಿಲ್ಲದಂತೆಯಾಗುತ್ತಿತ್ತೆಂದೂ ಅವಳು ಭಾವಿಸಿದ್ದುದರಿಂದ, ಸಾಮ್ರಾಜ್ಯಕ್ಕೆ ತನ್ನ ಪತಿಯೆ ಒಡೆಯನಾಗುವದು ಉಚಿತವೆಂದು ಲೆಕ್ಕಹಾಕಿದ್ದಳು. ತನ್ನ ಮನೋಗತವನ್ನು ಪತಿಯು ಸಮ್ಮತಿಸದಲ್ಲಿ ಮತ್ತೆ ಇಡಿ ತೋರಿಸಬೇಕೆಂದು ಅವಳು ಹೊಂಚು ಹಾಕಿದ್ದಳು; ಸಂಧಿಯು ಮಾತ್ರ ಒದಗಿ ಬಂದಿರಲೇ ಇಲ್ಲ.''

ವಿನಯಾಂಬಿಕೆಯು ಅಂತಃಪುರದಲ್ಲಿ ಮಂಚದ ಮೇಲೆ ಕುಳಿತಿದ್ದಳು. ರಾಜ್ಯಲೋಭಕ್ಕಾಗಿ ತಳಮಳಿಸುವ ಆ ಪಿಶಾಚಿಯ ಮನಸ್ಸಿನಲ್ಲಿ ಸಮಾಧಾನವಿದ್ದಿಲ್ಲವೆಂಬದು ಅವಳ ಮುಖ ಚಿಹ್ನದ ಮೇಲಿಂದ ಸ್ಪಷ್ಟವಾಗಿ ಕಂಡು ಬರುತ್ತಿತ್ತು. ಅನ್ಯರ ರಾಜ್ಯವನ್ನು ಗಿಳಂಕೃತ ಮಾಡಿ, ಸುಖ-ಸೌಕರ್ಯಗಳನ್ನು ಒದಗಿಸಿಕೊಳ್ಳಬೇಕೆಂಬ ರಾಕ್ಷಸೀಭಾವನೆಯಿಂದ ಕುದಿಯುತ್ತಿರುವ ಅಧಮಾಧಮರಿಗೆ ಸುಖ-ಶಾಂತಿಗಳೆಲ್ಲಿಂದ ದೊರೆಯಬೇಕು? ರಾಜ್ಯದ ರಾಜನು ತನ್ನ ಪತಿ ರಾಜನಾಗಿ, ತಾನು ರಾಜ್ಞೀಪದವನ್ನು ಹೊಂದಿ, ತನ್ನ ಪುತ್ರನು ಯುವರಾಜನೆಂದಾಗುವನೋ, ಎಂದು ಅವಳು ಹುಬ್ಬುಗೈಹಚ್ಚಿ ಭವಿತವ್ಯವನ್ನು ನಿರೀಕ್ಷಿಸತೊಡಗಿದ್ದಳು. ಯಾವ ಬಗೆಯ ಕಾರಸ್ಥಾನಗಳನ್ನು ನಡೆಯಿಸಿದರೆ, ತನ್ನ ಮನೋಗತವು ಈಡೇರಬಹುದೆಂದು ಅವಳು ನಾನಾ ವಿಧವಾಗಿ ಯೋಚಿಸ ತೊಡಗಿದ್ದಳು. ಹೇಗಾದರೂ ಮಾಡಿ ಪತಿಯ ಮನಸ್ಸನ್ನು ತಿರುಗಿಸಿದರೇನೇ ತನಗೆ ಶುಭೋದಯವಾಗುವದೆಂದು ಅವಳ ಮನವರಿಕೆಯಾಗಲು ಯಾವ ಬಗೆಯ ಕೃಷ್ಣಕೃತಿಗಳನ್ನು ರಚಿಸಿ, ಪತಿಯ ಪ್ರೇಮವನ್ನು ಪುಲಿಕೇಶಿಯ ಬಳಿಯಿಂದ ಕಿತ್ತುಕೊಳ್ಳಬೇಕೆಂದು ಹಂಚಿಕೆ ಹುಡುಕತೊಡಗಿದಳು.

"ಪ್ರಿಯೇ!"

ವಿನಯಾಂಬಿಕೆಯು ಈ ಸಂಬೋಧನವನ್ನು ಕೇಳಿದೊಡನೆಯೆ ಮುಖವನ್ನು ಮೇಲಕ್ಕೆತ್ತಿ ನೋಡಿದಳು. ಎದುರಿನಲ್ಲಿ ಪತಿರಾಜನು ಮೂರ್ತಿಮಂತನಾಗಿ ನಿಂತುಕೊಂಡಿದ್ದನು. ಕೂಡಲೆ ಅವಳು ಚಟ್ಟನೆ

ಎದ್ದು ಅವನ ಕೈಯನ್ನು ಹಿಡಿದು ಬಳಿಯಲ್ಲಿ ಕುಳ್ಳಿರಿಸಿಕೊಂಡಳು.

"ಎಷ್ಟು ಹೊತ್ತಿನ ವರೆಗೆ ನಿಂತಿದ್ದರೂ ನೀನು ನನ್ನ ಕಡೆಗೆ ನೋಡಲಿಲ್ಲವೆಂದ ಬಳಿಕ, ಯಾವದೋ ಒಂದು ಗಹನ ವಿಚಾರದಲ್ಲಿ ಮಗ್ನಳಾಗಿದ್ದೆಯೆಂದು ತರ್ಕಿಸುತ್ತೇನೆ"

"ಸ್ತ್ರೀಯರಾದ ನಮಗೆ ಗಹನ ವಿಚಾರ ಮಾಡುವಂತಹ ಕಾರಣಗಳೇನಿರಬೇಕು? ನೀವು ಬಂದದ್ದನ್ನು ನಾನು ನೋಡಲಿಲ್ಲ. ಸವಾರಿಯ ಆಗಮನವಾಗಿ ಬಹಳ ವೇಳೆಯಾಯಿತೇನು?" ಎಂದು ಮುಗುಳುನಗೆಯಿಂದ ನಗುತ್ತ ಪತಿದೇವನ ಸ್ಕಂಧಪ್ರದೇಶದಲ್ಲಿ ತನ್ನ ತೋಳು ಹಾಕಿ:—"ಬಂದು ಸುಮ್ಮನೆ ನಿಂತರೆ ತಿಳಿಯುವ ಬಗೆ ಹೇಗೆ?"

"ಬಚ್ಚಿಡುವೆ. ನೀನು ನಿನ್ನ ಮನೋಗತವನ್ನು ಮುಚ್ಚಿಕೊಂಡು ಚೋರತನದ ಅಪರಾಧಕ್ಕೆ ಗುರಿಯಾಗಬೇಕೆನ್ನುವೆ. ಹೇಳುವದಿಲ್ಲವೆ, ನಿನ್ನ ಮನಸ್ಸಿನೊಳಗಿನ ಆಲೋಚನೆಯನ್ನು?"

"ಪ್ರಿಯಕರಾ!............"

"ಏಕೆ? ಅರ್ಧಕ್ಕೇ ತಡೆದೆ?" ಎಂದು ಮಂಗಳೇಶನು ಉತ್ಕಂಠಿತನಾಗಿ ವಿಚಾರಿಸಿದನು ಆಗ ಅವಳು ಪತಿಯ ಮನವನ್ನು ಪ್ರಸನ್ನೀಕರಿಸಿಕೊಳ್ಳಬೇಕೆಂದು ಅನೇಕ ವಿಧವಾದ ಚೇಷ್ಟೆಗಳನ್ನು ಅಭಿನಯಿಸುತ್ತ:

"ನಿಮ್ಮೆದುರಿನಲ್ಲಿ ಮನದ ದುಗುಡವನ್ನು ಹೇಳಿದರೆ ಆಗಬೇಕಾದುದೇನೆಂಬದು ದೃಷ್ಟಿಪಥದಲ್ಲಿ ಮೂರ್ತಿಮಂತಾಗಿ ನಿಂತಿರಲಿಕ್ಕೆ ಅದನ್ನು ಹೇಳಿ ವೃಥಾ ದೋಷವನ್ನು ಹೊರುವದಕ್ಕೆ ನಾನು ಆಶಿಸುವದಿಲ್ಲ."

"ಛೀ! ಇದೇನು ಹೇಳುವೆ? ನಾನೆಂದಿಗಾದರೂ ನಿನ್ನ ಮನದ ವಿರುದ್ಧವಾಗಿ ನಡೆಯಬಹುದೆ?"

"ನನ್ನ ಮನಸ್ಸಿನಲ್ಲಿ ನೆಲೆಗೊಂಡ ಇಚ್ಛೆಯು ನಿಮಗೆ ರುಚಿಸಲಾರದೆಂದು ನನ್ನ ವಿಶ್ವಾಸವಿರುವದು. ಅಂದಮೇಲೆ ಸುಮ್ಮನೆ ದಣಿಕೊಳ್ಳಲೇಕೆ?"

"ಇಲ್ಲ-ಇಲ್ಲ. ಹಾಗೆಂದಿಗೂ ಇಲ್ಲ. ನಿನ್ನ ಇಚ್ಛೆಯೇ ನನ್ನ ಇಚ್ಛೆಯು. ನನ್ನ ಅಹಿತವನ್ನು ನೀನು ಚಿಂತಿಸುತ್ತಿರುವದಿಲ್ಲವಷ್ಟೇ? ಅಂದಮೇಲೆ ಸುಮ್ಮನೆ ಅನುಮಾನವೇಕೆ?"

"ನಿಮ್ಮ ಅಹಿತವನ್ನು ನಾನೇಕೆ ಚಿಂತಿಸಲಿ? ನಿಮಗೂ ನಿಮ್ಮ ಕುವರನಾದ ಇಂದ್ರವರ್ಮನಿಗೂ ಸೌಖ್ಯವಾಗಬೇಕೆಂದೇ ನನ್ನ ಬಯಕೆಯಿದೆ." ಎಂದು ನುಡಿದು, ವಿನಯಾಂಬಿಕೆಯು ತಡವರಿಸುತ್ತ:—"ನಾಥರೇ, ಪುಲಿಕೇಶಿಯ ವಿಷಯಕ್ಕಾಗಿ ನಿಮ್ಮ ಅಭಿಪ್ರಾಯವೇನಿರುವದು?"

"ಅಂದರೆ?" ಎಂದು ಮಂಗಳೇಶನು ಆತುರತೆಯಿಂದ ಕೇಳಿದನು. ಆಗ ವಿನಯಾಂಬಿಕೆಯು ಮುಂಚಿತವಾಗಿ ಸಿದ್ಧ ಮಾಡಿಟ್ಟ ಬಾಣಗಳನ್ನು ಪತಿಗೆ ಎಸೆಯಬೇಕೆಂದು ಯೋಚಿಸಿದಳು:

"ನಾಥರೇ, ಈ ಕರ್ನಾಟಕ ಸಾಮ್ರಾಜ್ಯಕ್ಕೆ ಸ್ಥೈರ್ಯವು ಯಾರಿಂದ ಪ್ರಾಪ್ತವಾಯಿತು? ಯಾರ ಕರ್ತವ್ಯಪ್ರಭಾವದಿಂದ ಸಾಮ್ರಾಜ್ಯದ ವಿಸ್ತಾರವು ಮಹೀನದಿಯ ವರೆಗೆ ವ್ಯಾಪಿಸಿತು? ಯಾರ ಸಾಮರ್ಥ್ಯದಿಂದ ಪರರಾಜರು ಮಾಂಡಲಿಕತ್ವವನ್ನು ವಹಿಸಿದರು? ಯಾರ ಅವಿಶ್ರಾಂತ ಶ್ರಮದಿಂದ ಚಾಲುಕ್ಯರ ವರಾಹಧ್ವಜವು ಮಹೀನದಿಯಿಂದ ರಾಮೇಶ್ವರದ ವರೆಗೆ ಮೆರೆಯಲಾರಂಭಿಸಿತು? ಇಂತಹ ವಿಕ್ರಮಾರ್ಜಿತ ಸತ್ವಶಾಲಿಗಳಾದ ನಿಮ್ಮಿಂದಲೇ ಭಾಗ್ಯೋದಯವು ಲಭಿಸಿತು ಇಂತಹ ಕರ್ತೃತ್ವಶಾಲಿಗಳಾದ ನೀವು ನಿಮ್ಮ ಭವಿಷ್ಯಕಾಲೀನ ಭೀಷಣಚಿತ್ರವನ್ನು ಕಲ್ಪನಾದೃಷ್ಟಿಯಿಂದ ಅವಲೋಕಿಸಿರುವಿರೇನು?"

"ಅದೇಕೆ? ಅಂತಹ ಪ್ರಸಂಗವೇನು ಘಟಿಸಿತು? ಈ ಮಂಗಳೇಶನಿಗೆ ಪ್ರತ್ಯಕ್ಷ ಯಮನ ಭಯವು ಕೂಡ ಇರುವದಿಲ್ಲ. ಪುಲಿಕೇಶಿಯು ರಾಜ್ಯಾಧಿಕಾರವನ್ನು ಕೈಯಲ್ಲಿ ತೆಗೆದುಕೊಂಡ ಮೇಲೆ ನನ್ನ ಗತಿಯೇನೆಂದು ಚಿಂತಿಸುತ್ತಿರುವಿಯಲ್ಲವೆ? ಈ ಸಾಮ್ರಾಜ್ಯದ ಚಾಲಕತ್ವವು ಆಜೀವವಾಗಿ ನನ್ನ ಕೈಯಲ್ಲಿಯೇ ಇರಲಾರದೆಂಬದಕ್ಕೆ

ನಿನಗೆ ಸಂದೇಹವೇನು ತೋರುವದು?"

"ನಾನು ಅದನ್ನೇ ನಿಮಗೆ ಹೇಳಬೇಕಾಗಿದೆ. ನೀವೀಗ ಭ್ರಾಮಕ ಕಲ್ಪನೆಗಳಿಂದ ವಿಸ್ಮೃತಿಯನ್ನು ಹೊಂದಿರುವಿರಿ. ಈಗಾಗಲೆ ಓಲಗದ ಜನರ ಹಾಗು ಪ್ರಜೆಗಳ ಅನುರಾಗವು ನಿಮ್ಮ ವಿಷಯಕ್ಕೆ ನಾಮಶೇಷವಾದಂತೆ ತೋರುವದು. ಪುಲಿಕೇಶಿಯ ವರ್ತನವಾದರೂ ಈಗ ಬೇರೆ ತರಹವಾಗಿರುವದು. ಹೀಗಾದ ಮೇಲೆ ನಿಮ್ಮ ಗೌರವವು ಸಾಮ್ರಾಜ್ಯದಲ್ಲಿ ಸ್ವಲ್ಪ ದಿವಸಗಳೊಳಗೆ ನಿರ್ಮೂಲವಾಗದಿರುವದು ಹೇಗೆ? ಆ ಮೂರ್ಖನು ಬುದ್ಧರಾಜಪುತ್ರಿಗೆ ಮನಸೋತು ಅವಳನ್ನು ವಿವಾಹವಾಗುವ ಹಟವನ್ನು ಸಾಧಿಸಿಕೊಂಡನು. ಇನ್ನು ಮೇಲೆ ಬುದ್ಧರಾಜನ ಚಕರಾಷ್ಟ್ರವು ಅವನಿಗೆ ನಿಶ್ಶಂಕೆಯಿಂದ ದೊರೆಯಬಹುದಾಗಿದೆ. ಸ್ವಲ್ಪ ದಿವಸಗಳಲ್ಲಿ ಎಲ್ಲ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು, ನಿಮ್ಮನ್ನು ಒಬ್ಬ ಸಾಮಾನ್ಯಸೇವಕನ ಸ್ಥಿತಿಗೆ ತಂದು ಹಚ್ಚುವನೆಂಬದು ಅವನ ವರ್ತನದಿಂದ ಈಗಾಗಲೆ ತಿಳಿದು ಬರುತ್ತದೆ ಹಾಗಿಲ್ಲದಿದ್ದರೆ ಪ್ರತಿಯೊಂದು ರಾಜಕಾರಣದಲ್ಲಿ ನಿಮಗೆ ಅಡ್ಡ ಬರುತ್ತಿರಲಿಲ್ಲ. ಸ್ವಾಮಿರಾಜನ ಕೊಲೆಯ ವಿಷಯಕ್ಕೆ ಅವನು ನಿಷೇಧಪ್ರದರ್ಶನ ಮಾಡಿದ್ದು ನಿಮ್ಮ ಲಕ್ಷ್ಯದಲ್ಲಿಲ್ಲವೆ? ಬುದ್ಧರಾಜನ ಸರ್ವರಾಜ್ಯಗಳನ್ನು ಕೈವಶ ಮಾಡಿಕೊಳ್ಳಬೇಕೆಂಬ ನಿಮ್ಮ ಆಕಾಂಕ್ಷೆಗೆ ಅವನು ವಿಘ್ನನಾಗಿಲ್ಲವೆ? ಸೇನಾಪತಿಯಾದ ಶಿವದೇವನನ್ನೂ, ಅಂಗರಕ್ಷಕನಾದ ಚಂದ್ರಸೇನನನ್ನೂ ಬಿಟ್ಟರೆ, ನಿಮ್ಮ ವಿಷಯಕ್ಕೆ ಪೂರ್ಣವಾಗಿ ಅಭಿಮಾನವುಳ್ಳವರಾರಿರುವರು? ವೃದ್ಧರಾದ ಸತ್ಯವರ್ಮ-ಪ್ರತಾಪವರ್ಮರು ಪುಲಿಕೇಶಿಯಲ್ಲಿ ಅತ್ಯಂತ ನಿಷ್ಠೆಯುಳ್ಳವರಿರುವರು. ನಿಮ್ಮ ವಿಷಯಕ್ಕೆ ಅವರು ತುಂಬ ತಿರಸ್ಕಾರಬುದ್ಧಿಯುಳ್ಳವರೂ, ನಿರ್ಭೀತರೂ ಆಗಿರುವರು. ರಾಜಮಾತೆಯೆಂದು ಮರ್ಯಾದೆಯಿಂದ ಮೆರೆಯುವ ಆ ಮುದಿ ದುರ್ಲಭದೇವಿಯಾದರೂ ಪುಲಿಕೇಶಿಯ ಪಕ್ಷದವಳೇ! ಸಾಮ್ರಾಜ್ಯದ ಆಧಾರಸ್ತಂಭರಾದ ನಿಮಗೆ ಈ ರೀತಿಯಾದ ವಿಟಂಬನೆಯು ಆಗಬೇಕೇ?

ಹೀಗಿದ್ದರೂ ದೊಡ್ಡ ಮನಸ್ಸು ಮಾಡಿಕೊಂಡು ಹೋಗುವದನ್ನು ನೋಡಿದರೆ, ಮನಸ್ಸಿಗೆ ಅತಿಶಯ ವಿಷಾದವೆನಿಸುವದು. ಹೀಗೆಯೇ ಎಷ್ಟು ದಿನಗಳ ವರೆಗೆ ಮನಸ್ಸಿನಲ್ಲಿಯ ದುಗುಡವನ್ನು ಹುದುಗಿಸಿಕೊಂಡು ಕುಳಿತುಕೊಳ್ಳಬೇಕೆಂದು ನಿಜಸ್ಥಿತಿಯನ್ನು ಬಿನ್ನಯಿಸಿರುವೆನು. ಹೊಟ್ಟೆಯ ಮಗನಾದ ಇಂದ್ರವರ್ಮನು ಭಿಕ್ಷಾಪಾತ್ರೆಯನ್ನು ಹಿಡಿದರೂ ಅಡ್ಡಿಯಿಲ್ಲ, ಕೀರ್ತಿವರ್ಮನ ಮಕ್ಕಳ ಮಂಗಳವೊಂದಾದರಾಯಿತು. ಇಂತು ನಿಮ್ಮ ಅಭಿಪ್ರಾಯವಿದ್ದರೆ ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ; ನೀವು ಪುಲಿಕೇಶಿಗಾಗಿ, ಅವನ ಬಂಧುಗಳ ಸಲುವಾಗಿ ಬೇಕಾದಂತೆ ವೇಷವನ್ನು ಧರಿಸಿರಿ. ಸುಖ-ಸೌಕರ್ಯಗಳಿಲ್ಲದ ರಾಜ್ಯದಲ್ಲಿರುವದಕ್ಕೆ ನನಗೇನೂ ಒಪ್ಪಿಗೆಯಿಲ್ಲ. ಹತಭಾಗಿಗಳಾದ ತಾಯಿ-ಮಕ್ಕಳಿರ್ವರೂ ಎಲ್ಲಾದರೂ ದೇಶಾಂತರಕ್ಕೆ ಹೋಗಿ ಭಿಕ್ಷಾಟನೆಗೈದು ಉಪಜೀವಿಸುವೆವು. ಎಂದಾದರೊಂದು ದಿನ ಬರತಕ್ಕ ಸಾವು ಇಂದೇ ಬಂದರೆ ಅದಕ್ಕೆ ನಾನೇಕೆ ಚಿಂತಿಸಲಿ? ನನಗೆ ಕೆಲವು ದಿವಸ ನಿಮ್ಮ ವಿಯೋಗವಾಗಬಹುದು. ನೀವಾದರೂ ನಮ್ಮಂತೆ ಕೈಲೋಡವಿಡಿದು ತೀರ್ಥ-ಯಾತ್ರೆ ಮಾಡುತ್ತಿರುವಾಗ ಕಾಶಿಯಲ್ಲಾಗಲಿ, ಬದರಿ-ಪ್ರಯಾಗಗಳಲ್ಲಾಗಲಿ ನಿಮ್ಮ ದರ್ಶನಲಾಭವು ದೊರೆಯಬಹುದು!”

ವಿನಯಾಂಬಿಕೆಯು ಹೀಗೆ ಮಾತನಾಡುವಾಗ ಗದ್ಗದಸ್ವರವುಳ್ಳವಳಾಗಿದ್ದಳು. ನೇತ್ರಗಳಲ್ಲಿ ಗಂಗಾ-ಯಮುನೆಗಳು ಹೊರಸೂಸಿ ಹರಿಯತೊಡಗಿದ್ದವು. ಪುರುಷರನ್ನು ಮಾಯಾಜಾಲದಲ್ಲಿ ಕೆಡಹಿ, ಸೂತ್ರದ ಬೊಂಬೆಗಳಂತೆ ಕುಣಿಸುವಂತಹ ಅಭಿನಯಕಲಾನೈಪುಣ್ಯವನ್ನು ಪಡೆದು ಹೆಸರಾದವರ ಮಾಲಿಕೆಯಲ್ಲಿ ವಿನಯಾಂಬಿಕೆಯು ಅಗ್ರೇಸರಳಿದ್ದಳು. ಅವಳಾಡಿದ ಮಾತಿನಿಂದ ಮಂಗಳೇಶನ ಹೃದಯಚಿತ್ರವು ಚಿತ್ರಪಟದೊಳಗಿನ ಚಿತ್ರದಂತೆ ನಿಮಿಷಾರ್ಧದಲ್ಲಿ ವಿಚಿತ್ರ ಭಾವವನ್ನು ತಾಳಿತು. ಅವಳ ಮಾತುಗಳಲ್ಲಿಯ ಪ್ರತಿಯೊಂದು ವಾಕ್ಯಗಳು, ವಾಕ್ಯಗಳೊಳಗಿನ ಪ್ರತಿಯೊಂದು ಶಬ್ದಗಳು, ಶಬ್ದಗಳೊಳಗಿನ ಪ್ರತಿಯೊಂದು ಅಕ್ಷರಗಳು ಸತ್ಯವುಳ್ಳವುಗಳಾಗಿರುವವೆಂದು

ಅವನ ಮನಸ್ಸಿಗೆ ನಂಬಿಗೆಯಾಯಿತು. ಆಗ ಅವನು ಕೆಲಹೊತ್ತಿನ ವರೆಗೆ ವಿಚಾರದಲ್ಲಿ ಮಗ್ನನಾಗಿ ಸ್ವಸ್ಥಚಿತ್ತದಿಂದ ಕುಳಿತನು. ಅವನು ಉತ್ತರವೀಯದೆ ಕುಳಿತದ್ದನ್ನು ನೋಡಿ, ಉತ್ಕಂಠಿತಳಾದ ವಿನಯಾಂಬಿಕೆಗೆ ಸಹನವಾಗಲಿಲ್ಲ. ಅವಳು ಕರ್ಕಶಧ್ವನಿಯಿಂದ:—

"ಯಾಕೆ, ಮಾತನಾಡುವದಿಲ್ಲವೇಕೆ? ನನ್ನ ಮಾತುಗಳು ನಿಮಗೆ ರುಚಿಸುವದಿಲ್ಲವೆಂದು ಮೊದಲೇ ಹೇಳಲಿಲ್ಲವೆ? ವಿನಾಶ ಕಾಲಕ್ಕೆ ವಿಪರೀತ ಬುದ್ಧಿಯು ಉದಯಿಸುವದು ಸ್ವಾಭಾವಿಕವಿರುವದು. ಅದಕ್ಕೆ ನೀವೇನು ಮಾಡೀರಿ?"

"ವಿನಯಾಂಬಿಕೇ! ಆತ್ಮಘಾತಮಾಡಿಕೊಳ್ಳುವಂತಹ ಹೀನ ಕೋಟಿಯವನಾನಿರುವೆನೆಂದು ಭಾವಿಸಬೇಡ. ನನ್ನ ವಿಕ್ರಮಾರ್ಜಿತ ರಾಜ್ಯಕ್ಕೆ ಕುಮಾರ ಇಂದ್ರವರ್ಮನನ್ನು ಒಡೆಯನನ್ನಾಗಮಾಡುವೆನು. ಪೂರ್ವಾರ್ಜಿತ ಸಾಮ್ರಾಜ್ಯವು ಪುಲಿಕೇಶಿಯ ಭಾಗದ್ದೇ ಇರುತ್ತದೆ"

"ಒಳ್ಳೆಯ ಆಲೋಚನೆಯಿದ್ದು! ಪುಲಿಕೇಶಿಯು ಸಾರ್ವಭೌಮನಾದರೆ ಕುಮಾರ ಇಂದ್ರವರ್ಮನಿಗೆ ರಾಜ್ಯವು ಸ್ಥಿರವಾಗಿ ಉಳಿಯಬಹುದೆಂಬ ಆಶೆಯು ತಿಲಾಂಶವಾದರೂ ನನಗಿರುವದಿಲ್ಲ ಅವನು ತನ್ನ ಒಡಹುಟ್ಟಿದವರಾದ ವಿಷ್ಣುವರ್ಧನ, ಇಮ್ಮಡಿಜಯಸಿಂಹರ ಹಿತಚಿಂತನೆ ಮಾಡುವನಲ್ಲದೆ, ಇಂದ್ರವರ್ಮನ ಸೌಖ್ಯಕ್ಕಾಗಿ ಮನಸ್ಸು ಮಾಡುವದಿಲ್ಲವೆಂದು ನನ್ನ ಮನೋದೇವತೆಯು ಹೇಳುತ್ತಲಿರುವದು. ಪುಲಿಕೇಶಿಯ ಹೃದಯವು ಸರಳವಿಲ್ಲವೆಂಬದನ್ನು ನಾನು ಮನಗಂಡದ್ದರಿಂದಲೇ ಹೀಗೆ ಮಾತನಾಡುತ್ತೇನಲ್ಲದೆ, ಮತ್ಸರ ಭಾವದಿಂದಲ್ಲ. ಪ್ರಿಯರೇ, ನಿಮ್ಮ ಪರಾಕ್ರಮದಿಂದ ಸಾಮ್ರಾಜ್ಯಕ್ಕೆ ಸ್ಥೈರ್ಯವುಂಟಾಗಿ, ಇದು ಸುದಿನಗಳನ್ನು ಕಂಡಿಲ್ಲವೇ? ಅಂದಮೇಲೆ ಈ ರಾಜ್ಯಕ್ಕೆ ಅಧಿಕಾರಿಗಳು ನೀವೇ ಅಲ್ಲದೆ, ಪುಲಿಕೇಶಿಯು ಹೇಗೆ ಬಾಧ್ಯಸ್ಥನಾಗುವನು? ಅವನು ತನ್ನ ಸತ್ವದಿಂದ ಹೊಸ ರಾಜ್ಯವನ್ನು ಗಳಿಸಿಕೊಳ್ಳುವದಕ್ಕೆ ನನ್ನದೇನು ಅಡ್ಡಿಯಿಲ್ಲ. ನಿಮ್ಮ ಹಾಗು ಕುಮಾರ ಇಂದ್ರವರ್ಮನ ಅಭ್ಯುದಯವಾಗಬೇಕಾದರೆ, ನೀವೇ

ಸಿಂಹಾಸನಾರೋಹಣ ಮಾಡಿರಿ; ಪುಲಿಕೇಶಿಯು ಹಬ್ಬ ದೊಡ್ಡ ಅಧಿಕಾರಸ್ಥನ ಸ್ಥಳದಲ್ಲಿದ್ದರೆ ಇರಲೊಲ್ಲನೇಕೆ? ಕುಮಾರ ಇಂದ್ರ ವರ್ಮನಿಗ ಯೌವರಾಜ್ಯಾಭಿಷೇಕ ಮಾಡಿಸಿರಿ. ಹೀಗೆ ಮಾಡಿದರೆ ನಿಮ್ಮ ಹಾಗು ಇಂದ್ರವರ್ಮನ ಅಸ್ತಿತ್ವವೂ ಗೌರವವೂ ಸಾಮ್ರಾಜ್ಯ ದಲ್ಲಿ ಉಳಿಯುತ್ತವೆ; ಇಲ್ಲವಾದರೆ ಭಿಕ್ಷಾವೃತ್ತಿಯನ್ನವಲಂಬಿಸುವ ಪ್ರಸಂಗವು ನಿಶ್ಚಯವಾಗಿ ಒದಗುವದು. ನೀವು ನನಗೆ ಕ್ಷುದ್ರ ಮನೋವೃತ್ತಿಯವಳೆನ್ನಿರಿ! ಹೊಟ್ಟೆಯುರಕಳೆನ್ನಿರಿ! ರಾಕ್ಷಸೀಮಹ ತ್ವಾಕಾಂಕ್ಷೆಯವಳೆನ್ನಿರಿ! ಬೇಕಾದಂತೆ ನನಗ ಹೆಸರಿಟ್ಟರೂ ಅಡ್ಡಿ ಯಿಲ್ಲ ನಿಸ್ಪೃಹವೃತ್ತಿಯಿಂದ ವಸ್ತುಸ್ಥಿತಿಯನ್ನು ನಿವೇದಿಸುವದಕ್ಕ ನನಗೆ ಭಯವೇನು?"

"ವಿನಯಾಂಬಿಕೇ! ನಿನ್ನ ಉಪದೇಶದಿಂದ ನನ್ನಲ್ಲಿದ್ದ ಅಜ್ಞಾನತಮವು ದೂರಾಯಿತು. ಸಂಬಂಧವಿಲ್ಲದ ವ್ಯಾಮೋಹದಿಂದಲೂ, ಹಿಂದೆ ಅಜ್ಞಾನದಿಂದ ಮಾಡಿದ ಪ್ರತಿಜ್ಞೆಯ ಬಂಧನದಿಂದಲೂ, ನಾನು ನನ್ನ ಹಾಗು ಕುಮಾರ ಇಂದ್ರವರ್ಮನ ಭಾಗ್ಯೋದಯದ ಕೃತಿಗಳನ್ನು ಪೂರ್ಣವಾಗಿ ಮರೆತು, ಭ್ರಮಿಷ್ಟನಂತೆ ವರ್ತಿಸತೊಡಗಿದ್ದೆನು. ನೀನು ನನ್ನ ಕಣ್ಣಿಗೆ ಜ್ಞಾನಾಂಜನವನ್ನಿಕ್ಕಿದೆ. ಇನ್ನು ನನ್ನ ಸ್ವಭಾವದಲ್ಲಿ ಅಭ್ಯಂತರವಾದದ್ದನ್ನು ಬೇಗನೆ ನೋಡುವೆ. ಸ್ವಾರ್ಥಿಯಾದ ಪುಲಿಕೇಶಿಯು ಹಾಗು ಅವನ ಪಕ್ಷದವರ ಅವಸ್ಥೆಯು ಹೇಗಾಗುತ್ತದೆಂಬುದನ್ನು ಕಣ್ಮುಟ್ಟಿ ನೋಡಿ ಆನಂದಪಡುವೆಯಂತೆ. ಸರ್ವಶಕ್ತನಾದ ನನಗೆ ಯಾವ ಕಾರ್ಯವಾದರೂ ಅಸಾಧ್ಯವಿರುವದಿಲ್ಲ. ನೀನು ಇಂದಿನಿಂದ ಮಹಾರಾಜ್ಞಿಯಾದೆ. ಇದೇ ನನ್ನ ಅಭಯವು."

ವಿಷಬೀಜಾರೋಪಣದಿಂದ ಅಮೃತೋಪಮ ಫಲವು ದೊರಕುವ ಸಂಧಿಯು ಪ್ರಾಪ್ತವಾದುದಕ್ಕೆ ವಿನಯಾಂಬಿಕೆಯು ಆನಂದ ಗಿರಿಯ ಅತ್ಯುಚ್ಚ ಶಿಖರದ ಮೇಲೇರಿ ಕುಳಿತಳು!

---

## ವ್ಯಾಘ್ರಮುಖ ಗೋವು! ಗೋಮುಖ ವ್ಯಾಘ್ರ!

ರಾಜಮಾತೆಯಾದ ದುರ್ಲಭದೇವಿಯು ಆಗಲೇ ಮರಣ ಹೊಂದಿದ್ದಳು. ಅವಳ ಮರಣದಿಂದ ಪುಲಿಕೇಶಿಗೆ ಅತಿಶಯವಾದ ಚಿಂತೆಯಾಗಿತ್ತು. ನಿಜವಾದ ಅಂತಃಕರಣವುಳ್ಳವಳೂ ಮಾರ್ಗದರ್ಶಕಳೂ ಹಿತಚಿಂತಕಳೂ ಮಾತೃಸ್ಥಾನದಲ್ಲಿದ್ದವಳೂ ಆದ ಅವಳ ಮೃತಿಯು ಚಿಕ್ಕವಯಸ್ಸಿನವನಾದ ಪುಲಿಕೇಶಿಯನ್ನು ದುಃಖಸಾಗರದಲ್ಲಿ ಕೆಡಹದೇನು ಮಾಡೀತು? ವಿನಯಾಂಬಿಕೆಯ ವಿಷಬೀಜಾರೋಪಣದಿಂದ ಮಲಿನಹೃದಯದವನಾದ ಮಂಗಳೇಶನ ತಾಂಡವನೃತ್ಯಕ್ಕೆ ಸಾಪತ್ನಮಾತೆಯ ಮರಣದಿಂದ ಉಗ್ರಕಳೆಯು ಪ್ರಾಪ್ತವಾಗಿತ್ತು. ಆತನು ಪ್ರತಾಪವರ್ಮ-ಸತ್ಯವರ್ಮರ ಮತವನ್ನು ಕೇಳದೆ, ಪುಲಿಕೇಶಿಯನ್ನು ಲಕ್ಷಿಸದೆ, ಕೇವಲ ಶಿವದೇವ-ಚಂದ್ರಸೇನರ ಸಹಾಯದಿಂದ ರಾಜ್ಯಶಕಟವನ್ನು ಸಾಗಿಸತೊಡಗಿದ್ದನು. ಹೀಗಿದ್ದರೂ ಚಾಲುಕ್ಯಸಾಮ್ರಾಜ್ಯಕ್ಕೆ ಹಾನಿಯೊದಗಬಾರದೆಂದು ನಿಷ್ಠಾವಂತರಾದ ಆ ಮಂತ್ರಿ-ಸೇನಾಪತಿಗಳು ತಮ್ಮ ಕರ್ತವ್ಯಪಾಲನೆಯ ಧರ್ಮದಿಂದ ಚ್ಯುತರಾಗಿದ್ದಿಲ್ಲ. ಅಪ್ರತಿಮ ರಾಜನಿಷ್ಠೆಯುಳ್ಳವರಾದ ಅವರಿಗೆ ಸಭೆಯಲ್ಲಿ ಮಾನ-ಮರ್ಯಾದೆಗಳಿಲ್ಲದಂತಾಗಿದ್ದವು. ಎಷ್ಟೋ ಪ್ರಸಂಗಗಳಲ್ಲಿ ಮಂಗಳೇಶನು ಅವರ ಮಾನಖಂಡನೆಯನ್ನು ಬುದ್ಧಿಪೂರ್ವಕವಾಗಿ ಮಾಡಿದ್ದರೂ ಕೇವಲ ಪುಲಿಕೇಶಿಯ, ಅರ್ಥಾತ್ ಚಾಲುಕ್ಯಸಾಮ್ರಾಜ್ಯದ ಉತ್ಕರ್ಷೆಗಾಗಿ ಯತ್ನಿಸುವಂತಹರಿದ್ದುದರಿಂದ, ಅವರು ಮಂಗಳೇಶನ ವಿಟಂಬನೆಯನ್ನು ಸಹಿಸಿದ್ದರು. ಮೊದಲು ಅಂಗರಕ್ಷಕನಾಗಿದ್ದ ಚಂದ್ರಸೇನನು ಲಾಂಗೂಲ ಚಾಲನದಿಂದ ದೊಡ್ಡಸ್ತಿಕೆಗೇರಿ, ಈಗ ಮಂತ್ರಿಪದವನ್ನಾರೋಹಿಸಿದ್ದನು. ರಾಜಕಾರ್ಯಧುರಂಧರನೂ ಜ್ಞಾನವೃದ್ಧನೂ ವಯೋವೃದ್ಧನೂ ಆದ ಸತ್ಯವರ್ಮನು ನಾಮಧಾರಿಮಂತ್ರಿಯಾಗಿ ಕಾರ್ಯಸಾಧಕನಾದ ಚಂದ್ರಸೇನನು ಸಾಮ್ರಾಜ್ಯದ ಮಂತ್ರಾಲೋಚಕನಾಗಿದ್ದನು!

ಮಂಗಳೇಶನ ಕಾರಸ್ಥಾನವನ್ನು ಸತ್ಯವರ್ಮನು ಬೇಗನೆ ಕಂಡು ಹಿಡಿದಿದ್ದನು. ಮಹಾಕೂಟದ ಶಿವಮಂದಿರಕ್ಕೆ ಇನಾಮು ಗಳು ಸಾಕಷ್ಟಿಲ್ಲದ್ದರಿಂದ ಮತ್ತೆ ಹತ್ತುಗ್ರಾಮಗಳನ್ನು ಹಚ್ಚಿ ಕೊಡ ಬೇಕಾದ ಕಾರ್ಯದಲ್ಲಿ ಸಹ ದುರ್ಲಭದೇವಿಯು ಹಾಗು ತನ್ನ ಮತ ವನ್ನು ಕೇಳದಂತಹನು, ಈಗ ಮನಬಂದಂತೆ ಆಚರಿಸತೊಡಗಿದ್ದನ್ನು ನೋಡಿ, ತಾನೇ ಸಿಂಹಾಸನಾರೋಹಣ ಮಾಡಬೇಕೆಂಬ ದುರ್ಬು ದ್ಧಿಯು ಮಂಗಳೇಶನಲ್ಲಿ ಹುಟ್ಟಿರುವದೆಂಬದು ಅವನಿಗೆ ನಿಶ್ಚಯ ವಾಗಿ ತಿಳಿಯಿತು. ಮಹಾಕೂಟದಲ್ಲಿ ರೇವತೀದ್ವಿಪದ ವಿಜಯದ ನಂತರ ನಿಲ್ಲಿಸಿದ ಜಯಸ್ತಂಭದಲ್ಲಿ ತನ್ನ ಆಢ್ಯತೆಯನ್ನು ಬೆಳೆಯಿಸಿ ಕೊಳ್ಳುವಂತೆ ರೇಖಿಸಿದ್ದರಿಂದಂತೂ ತನ್ನ ತರ್ಕವು ನಿಜವಾದದ್ದೆಂದು ಅವನು ತಿಳಿದನು. ಪುಲಿಕೇಶಿಯು ಮೇಲೆ ಬಂದ ಈ ಅರಿಷ್ಟ ನಿವಾ ರಣೆಯು ಹೇಗಾಗುವದೋ ಎಂದು ಆ ಸ್ವಾಮಿನಿಷ್ಠನು ಹಗಲಿರುಳು ಕುದಿಯುತೊಡಗಿದ್ದನು. ಈ ಪ್ರಸಂಗದಲ್ಲಿ ಮೌನವನ್ನು ತಾಳಿದರೆ, ಪುಲಿಕೇಶಿಯು ನಿಜವಾಗಿ ಪದಭ್ರಷ್ಟನಾಗಿ, ಸ್ವಾರ್ಥಿಯಾದ ಮಂಗ ಳೇಶನು ತಾನೇ ರಾಜ್ಯಾರೋಹಣ ಮಾಡುವನೆಂದು ಆ ಧೂರ್ತನು ತರ್ಕಿಸಿದ್ದನು.

ಸತ್ಯವರ್ಮ-ಪ್ರತಾಪವರ್ಮರ ವರ್ಚಸ್ಸು ಚೆನ್ನಾಗಿದ್ದುದರಿಂ ದಲೂ, ಪುಲಿಕೇಶಿಯ ಸದ್ಗುಣಗಳ ಪರಿಚಯವು ಸರ್ವಪ್ರಜಾಜನರಿ ಗಿದ್ದುದರಿಂದಲೂ ಅವರ ಮನಸ್ಸಿನ ವಿರುದ್ಧವಾಗಿ ಹಿಮ್ಮೆಲೆ ತಾನೇ ಸಾರ್ವಭೌಮನೆಂದು ಸಾರುವ ಯೋಗ್ಯತೆಯು ಇನ್ನೂ ಮಂಗಳೇಶನಲ್ಲಿ ಬಂದಿರಲಿಲ್ಲ ಅವನು ಭೇದೋಪಾಯ ತಂತ್ರಗಳನ್ನು ಕೈಕೊಂಡು ಪ್ರಜಾಜನರನ್ನು ತನ್ನ ಕಡೆಗೆ ಒಲಿಸಿಕೊಳ್ಳುವ ಸಾಹಸ ನಡೆಸಿದ್ದನು. ಪುಲಿಕೇಶಿಯು ವಿಷಯಕ್ಕೆ ಇಲ್ಲದ ದೋಷಗಳನ್ನು ಕಲ್ಪಿಸಿ, ಅವನು ರಾಜ್ಯವಾಳುವದಕ್ಕೆ ಅನರ್ಹನಿರುವನೆಂತಲೂ, ಅವನ ಕೈಯಲ್ಲಿ ರಾಜ್ಯ ಸೂತ್ರಗಳು ದೊರೆತರೆ, ಸಾಮ್ರಾಜ್ಯವು ಮಣ್ಣು ಪಾಲಾಗುವ ಪ್ರಸಂ ಗವು ಬರುವದೆಂತಲೂ ಜನರಿಗೆ ಹೇಳತೊಡಗಿದ್ದನು.

ಪುಲಿಕೇಶಿಯೂ, ಸತ್ಯವರ್ಮನೂ ಸೌಧಾಗ್ರದಲ್ಲಿ ಕುಳಿತು ಕೊಂಡಿದ್ದರು. ಮಂಗಳೇಶನ ಕಾರಸ್ಥಾನದ ಸಲುವಾಗಿ ಅವರು ಚರ್ಚಿಸತೊಡಗಿದ್ದರು. ವಿಜಯಾಂಬಿಕೆಯು ಅವರ ಭಾಷಣಗಳನ್ನು ಕೇಳುತ್ತ ತಟಸ್ಥವೃತ್ತಿಯಿಂದ ಅಲ್ಲಿಯೇ ಬಳಿಯಲ್ಲಿದ್ದ ಸುವರ್ಣ ಮಂಚಕದ ಮೇಲೆ ಕುಳಿತುಕೊಂಡಿದ್ದಳು. ಮುಂದಾಗಿ ಸೂಚಿಸಿದ ಮೇರೆಗೆ ಪ್ರತಾಪವರ್ಮನು ಬಂದನು. ಆಗ ಪುಲಿಕೇಶಿಯು:—

"ಸೇನಾಪತಿಗಳೇ, ನನ್ನ ಚಿಕ್ಕಂದಿರ ಮನಸ್ಸು ಈಗ ಬದಲಾಗಿದೆ. ಅವರು ಚಾಲುಕ್ಯಸಾರ್ವಭೌಮರೆನಿಸಿಕೊಳ್ಳುವ ಹವ್ಯಾಸದಲ್ಲಿ ತೊಡಗಿರುವರು. ಅವರೇ ರಾಜ್ಯಪದವನ್ನಾರೋಹಿಸಬೇಕೆಂದು ನಿಮ್ಮೆಲ್ಲರ ಇಚ್ಛೆಯಿದ್ದರೆ, ಅದಕ್ಕೆ ನನ್ನ ಪ್ರತಿಬಂಧವಿಲ್ಲ. ನಿಮ್ಮ ಅಭಿಪ್ರಾಯವನ್ನು ನಿರ್ದಾಕ್ಷಿಣ್ಯದಿಂದ ಹೇಳಿಬಿಡಿರಿ."

"ಮಹಾರಾಜರೇ, ನನ್ನನ್ನು ನೀಚಕೋಟಿಯವನೆಂದು ಭಾವಿಸಿ ಹೀಗೆ ಕೇಳುವಿರಾ? ಸತ್ಯವರ್ಮರು ತಮ್ಮ ಇಚ್ಛೆಯನ್ನು ನಿವೇದಿಸಿರುವಿರಲ್ಲವೇ?"

"ಹೌದು; ಅವರು ತಮ್ಮ ಮನೋಗತವನ್ನು ತಿಳಿಸಿರುವರು"

"ಅವರಂತೆಯೇ ನನ್ನ ಅಭಿಪ್ರಾಯವಾದರೂ ಇರುತ್ತದೆ. ರಾಜ್ಯದ ನಿಜವಾದ ಬಾಧ್ಯಸ್ಥನನ್ನು ಅಲ್ಲಗಳೆದು, ಮತ್ತೊಬ್ಬ ಸ್ವಾರ್ಥಿಯ ಕಾರಸ್ಥಾನದಲ್ಲಿ ಸೇರುವಂತಹ ರಾಜದ್ರೋಹಿಯು ನಾನಲ್ಲ. ನಿಮ್ಮ ಚರಣಸಾಕ್ಷಿಯಾಗಿ ಹೇಳುತ್ತೇನೆ; ಈ ದೇಹವು ಭೂಮಿಗೆ ಬೀಳುವ ವರೆಗೆ ತಮ್ಮ ಹಿತಕ್ಕಾಗಿ ನಾನು ಯತ್ನಿಸತಕ್ಕವನೇ!"

ಸತ್ಯವರ್ಮನಂತೆಯೇ ಪ್ರತಾಪವರ್ಮನಾದರೂ ಮಾತನಾಡಿದ್ದರಿಂದ ಪುಲಿಕೇಶಿಗೆ ಆನಂದವಾಯಿತು. ರಾಜ್ಯಸೂತ್ರಗಳನ್ನೆಲ್ಲ ಸ್ವಯಲ್ಲಿ ತೆಗೆದುಕೊಂಡು ಬಲಾಢ್ಯನಾದ ಮಂಗಳೇಶನನ್ನು ಅಧಿಕಾರದಿಂದ ಚ್ಯುತಗೊಳಿಸುವ ಕಾರ್ಯವು ಸಾಮಾನ್ಯಕೋಟಿಯೊಳಗಿನದಲ್ಲವೆಂಬದು ಎಲ್ಲರಿಗೂ ಮನವರಿಕೆಯಾಗಿತ್ತು. ಹಿಮ್ಮೇಲೆ ಅವನ ವಿರುದ್ಧವಾಗಿ ಎದ್ದು ಕುಳಿತರೆ, ಅದರ ಅನಿಷ್ಟ ಪರಿಣಾಮವು

ಸಾಮ್ರಾಜ್ಯಕ್ಕೆ ಸಹ ತಗಲಿ ಅನರ್ಥವಾಗುವದೆಂದು ಅವರು ತಿಳಿದಿದ್ದರು. ಶಕ್ಯವಾದ ಮಟ್ಟಿಗೆ ರಕ್ತಪಾತವಾಗದಂತೆ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂದು ಅವರು ನಿಶ್ಚಯಿಸಿಕೊಂಡರು.

'ಇಷ್ಟೆಲ್ಲ ಅನರ್ಥಪರಂಪರೆಗೆ ನಾನೇ ಕಾರಣಳು!' ವಿಜಯಾಂಬಿಕೆಯು ನಿಟ್ಟುಸಿರು ಬಿಟ್ಟು:— "ತಮ್ಮ ಶತ್ರುವಿನ ಮಗಳೆಂದು ನನ್ನ ವಿಷಯಕ್ಕೆ ಮಾವಂದಿರು ಕ್ರುದ್ಧರಾಗಿರುವರು. ನನ್ನನ್ನು ನೀವು ವರಿಸದಿದ್ದರೆ, ಅವರು ನಿಮ್ಮ ಬಗ್ಗೆ ಪ್ರೇಮದಿಂದ ಇರುತ್ತಿದ್ದರು."

"ನೀನು ಹುಚ್ಚಿಯು" ಎಂದು ಪುಲಿಕೇಶಿಯು ನುಡಿದ ಕೂಡಲೆ ಸತ್ಯವರ್ಮನು:— "ದೇವಿಯವರೇ, ನೀವು ನಿಮಿತ್ತಮಾತ್ರರು. ಕುಹಕಬುದ್ಧಿಯವರಿಗೆ ಯಾವದೊಂದು ಕಾರಣವು ಬೇಕಾಗುವದು. ಕಾಲುಕೆದರಿ ವ್ಯಾಜ್ಯ ಹೂಡುವವರಿಗೆ ಕಾರಣಗಳಿಗೇನು ಕಡಿಮೆ?"

"ಏನೇ ಇರಲಿ, ಹಿರಿಯರ ಮಾತು ಮೀರಿ ವಿವಾಹವಾದ ಬಗ್ಗೆ ರಾಜವಂದಿಂದಲ್ಲಿ ಮನಸ್ತಾಪವಾಯಿತೆಂದು ಅನ್ನುವದಕ್ಕೆ ಸಾಮಾನ್ಯ ಜನರಿಗೆ ಕಾರಣವು ದೊರೆಯಿತು."

"ಲಾವಣ್ಯವತೀ, ಅಲ್ಲ; ವಿಜಯಾಂಬಿಕೇ, ನಾನು ನಿನ್ನನ್ನು ವಿವಾಹವಾದ ಮಾತ್ರಕ್ಕೆ ದೊಡ್ಡ ಅಪರಾಧಿಯಾದೆನೇನು?"

"ಮಹಾರಾಜರೇ, ನೂತನಮಂತ್ರಿಯಾದ ಚಂದ್ರಸೇನನೇ ಈ ವ್ಯೂಹದ ಉತ್ಪಾದಕನೆಂದು ನನ್ನ ಭಾಸವಾಗಿದೆ. ಅವನು ತನ್ನ ಪ್ರತಿಷ್ಠೆಗಾಗಿ ಮಂಗಳೀಶನ ಮನಸ್ಸನ್ನು ಕಲುಷಿತ ಮಾಡಿರುವನು." ಎಂದು ಪ್ರತಾಪವರ್ಮನು ನುಡಿದ ಕೂಡಲೆ:—

"ಹಾ! ಇಲ್ಲದ ದೋಷವನ್ನು ಚಂದ್ರಸೇನನ ಮೇಲೆ ಹೊರಿಸಬೇಡಿರಿ" ಎಂದು ವಿಜಯಾಂಬಿಕೆಯು ನುಡಿದು, ತಟ್ಟನೆ ನಾಲಿಗೆಯನ್ನು ಅಷ್ಟಕ್ಕೇ ಬಿಗಿ ಹಿಡಿದಳು. ಅವಳು ಹೀಗೆ ಮಾತನಾಡಿದ್ದರಿಂದ ಎಲ್ಲರಿಗೂ ಸೋಜಿಗೆವಾಯಿತು. ಚಂದ್ರಸೇನನ ಪಕ್ಷಹಿಡಿದು ಅವಳು ಮಾತನಾಡಿದ್ದನ್ನು ಕೇಳಿ, ಪುಲಿಕೇಶಿಗಂತೂ ಪರಮಾಶ್ಚರ್ಯವಾಯಿತು. ಆಗ ಅವನು ಚಕಿತಮುದ್ರೆಯಿಂದ:—

"ವಿಜಯಾಂಬಿಕೇ, ನೀನು ಇದೇನು ಮಾತನಾಡುವೆ?"

"ಮಹಾರಾಜರೇ, ಸಹಜವಾಗಿ ನನ್ನ ಬಾಯಿಂದ ಹೊರಟ ಮಾತಿಗಾಗಿ ಇಷ್ಟೇಕೆ ಆಶ್ಚರ್ಯಗೊಳ್ಳುವಿರಿ?"

"ಇಲ್ಲ-ಇಲ್ಲ; ಸಹಜವಾಗಿ ನಿನ್ನ ಬಾಯಿಂದ ಈ ಮಾತುಗಳು ಹೊರಟಿಲ್ಲ. ನಿಜವಾಗಿ ಹೇಳು, ನಿನ್ನ ಮಾತಿನಲ್ಲಿ ಏನೋ ಗೂಢ ವಿರುವದೆಂದು ಭಾಸವಾಗುವದು"

"ನೀವು ನಿಜವಾಗಿಯೂ ಚಾಣಾಕ್ಷರು. ನನ್ನ ಅನುಮಾನ ವಾದರೂ ಹಾಗೆಯೇ ಇರುವದು" ಎಂದು ಪುಲಿಕೇಶಿಯನ್ನು ಕುರಿತು ಸತ್ಯವರ್ಮನು ನುಡಿದನು

'ಮಹಾರಾಜರೇ, ಈ ಮಾತಿನ ಸಲುವಾಗಿ ಪ್ರಯತ್ನಿಸಬೇಡಿರಿ.'

"ಅದೇಕೆ? ಇಲ್ಲಿ ಪರಕೀಯರಾರೂ ಇರುವದಿಲ್ಲ. ಹೇಳು, ನಿಜವಾದ ಸಂಗತಿಯನ್ನು ಮರೆಮಾಜದೆ ಹೇಳು" ಎಂದು ಪುಲಿಕೇಶಿಯು ಗೂಢವಾದ ಸಂಗತಿಯನ್ನು ಹೇಳುವದಕ್ಕೆ ಹಟತೊಟ್ಟನು. ಆಗ ವಿಜಯಾಂಬಿಕೆಯು ಅನಿವಾರ್ಯದಿಂದ:—

"ನಾನು ಹೇಳಬೇಕಾದ ಸಂಗತಿಯು ಅತ್ಯಂತ ಮಹತ್ವದ್ದಿರುವದರಿಂದ ಬಹಳೇ ಗೌಪ್ಯದಿಂದಿರಬೇಕಾಗಿರುವದು. ಹಾಗೆ ಗುಪ್ತವಾಗಿರಿಸಲಿಕ್ಕೆ ಎಲ್ಲರೂ ಸಮ್ಮತಿಸಿದರೆ ಮಾತ್ರ ನಾನು ನಿಜಸ್ಥಿತಿಯನ್ನು ಹೇಳುವೆನು.

ಹೀಗೆ ವಿಜಯಾಂಬಿಕೆಯು ನುಡಿದ ಕೂಡಲೆ ಅವಳ ಮಾತಿನಂತೆ ನಡೆಯುವದಕ್ಕೆ ಮೂವರೂ ಒಪ್ಪಿದರು. ಆಗ ಅವಳು ಪತಿಯನ್ನುದ್ದೇಶಿಸಿ:—

"ಮಾವಂದಿರು ತಾವೇ ಸಿಂಹಾಸನಾರೋಹಣ ಮಾಡಬೇಕೆಂದು ನಿಶ್ಚಯಿಸಿರುವರಂತೆ. ಅವರ ಮನಸ್ಸನ್ನು ಈ ರೀತಿಯಾಗಿ ಸಿದ್ಧ ಮಾಡುವದಕ್ಕೆ ಕಾರಣರು ಮತ್ತಾರೂ ಇರದೆ, ವಿನಯಾಂಬಿಕಾ ಅತ್ತೆಯವರಾಗಿರುವರು. ಮಾವಂದಿರ ಮನಸ್ಸು ಉದಾತ್ತವೂ ನಿಸ್ವಾರ್ಥವೂ ಆಗಿದ್ದರೆ, ಅವರ ಮಾತಿಗೆ ಮನಸೋಲುತ್ತಿರಲಿಲ್ಲ.

ನಿಮ್ಮ ವಿಷಯಕ್ಕೆ ಪ್ರಜಾ ಜನರಲ್ಲಿ ಅಪ್ರೀತಿಯನ್ನು ಹುಟ್ಟಿಸಿ, ಮಂತ್ರಿ-ಸೇನಾಪತಿಗಳನ್ನು ಅಧಿಕಾರದಿಂದ ಚ್ಯುತ ಮಾಡಿ, ಸ್ವಲ್ಪ ದಿನಗಳಲ್ಲಿ ಆವರು ಪಟ್ಟಾಭಿಷೇಕ ಮಾಡಿಸಿಕೊಳ್ಳುವವರಿರುವರಂತೆ!" ಎಂದು ವಿಜಯಾಂಬಿಕೆಯು ನುಡಿದು, ವಿನಯದಿಂದ:—"ಹೆಚ್ಚಿನ ಸಂಗತಿಯನ್ನು ಕೇಳುವ ಸಾಹಸಕ್ಕೆ ಹೋಗಕೂಡದು. ಅದರಿಂದ ಪ್ರತಿಜ್ಞಾಭಂಗದ ದೋಷವು ಬರುವದಲ್ಲದೆ, ಉಳಿದ ಎಲ್ಲ ಸಂಗತಿಗಳನ್ನು ಹೇಳುವದರಿಂದ ನಿಮಗೆ ಅಹಿತವೇ ಅಗುವ ಸಂಭವವಿದೆ. ಪತಿಯಾಜ್ಞೆಯನ್ನು ಉಲ್ಲಂಘಿಸಿದ ಪಾತಕವೊದಗೆಬಾರದೆಂದು ಮುಖ್ಯ ಸಂಗತಿಯನ್ನು ಹೇಳಿರುವೆನು. ನನ್ನ ಒಬ್ಬ ಬಂಧುಸಮಾನನಾದ ಮನುಷ್ಯನಿಂದ ಈ ಸಂಗತಿಯು ತಿಳಿಯಿತು. ಇನ್ನು ನಿಮ್ಮ ಮಾರ್ಗವನ್ನು ನೀವು ಕಂಡುಕೊಳ್ಳಿರಿ"

"ನಮ್ಮ ತರ್ಕವು ನಿಜವಾಯಿತು. ಆಗಲಿ, ಕಪಟಿಯು ಕಾರಸ್ಥಾನವನ್ನು ಮಣ್ಣುಗೂಡಿಸದಿದ್ದರೆ ಕೈಯಲ್ಲಿ ಶಸ್ತ್ರವನ್ನು ಹಿಡಿದೇನು ಫಲ?" ಎಂದು ಕ್ರೋಧೋನ್ಮತ್ತನಾಗಿ ಪ್ರತಾಪವರ್ಮನು ತನ್ನ ಕತ್ತಿಯನ್ನು ಒರೆಯಿಂದ ಹಿರಿದು ಮಾತನಾಡಿದನು.

"ಶಕ್ತಿಯನ್ನು ವ್ಯಯಮಾಡಿ ಕಾರ್ಯಸಾಧನೆ ಮಾಡಿಕೊಳ್ಳುವದಕ್ಕಿಂತಲೂ ಯುಕ್ತಿಯಿಂದ ಕೆಲಸ ಮಾಡುವದು ಮೇಲು. ಗೃಹಕಲಹದ ಬೇಗೆಯಿಂದ ಪ್ರಜಾಕ್ಷಯವಾಗುವದನ್ನು ನಾನು ನೋಡಲಾರೆನು ನಮ್ಮ ನಮ್ಮೊಳಗಿನ ಕಲಹ ಲಾಭವು ಪರಕೀಯರಿಗೆ ದೊರೆತು, ಸಾಮ್ರಾಜ್ಯದ ಸ್ಥಿರವಾದ ಹಾನಿಮಾಡಬೇಕೆಂದು ನನ್ನ ಮನಸ್ಸಿನಲ್ಲಿಲ್ಲ. ಯುಕ್ತಿಪ್ರಯುಕ್ತಿಗಳಿಂದ ಕಾರ್ಯವಾದರೆ ಒಳಿತು; ಇಲ್ಲವಾದರೆ ನಾನು ರಾಜ್ಯವನ್ನು ತ್ಯಜಿಸುವದಕ್ಕೆ ಸಹ ಸಿದ್ಧನಿರುವೆನು" ಎಂದು ಪುಲಕೇಶಿಯು ನುಡಿದೊಡನೆಯೆ—

"ಮಹಾರಾಜರೇ, ಇಂತಹ ವಿರಕ್ತಿಯಿಂದ ಕಾರ್ಯವಾಗುವ ದಿನಗಳಿಲ್ಲ. 'ಶಠಂ ಪ್ರತಿ ಶಾಠ್ಯಂ' ಎಂಬಂತೆ ಮಾಡಿದ ಹೊರತು ಗತ್ಯಂತರವಿಲ್ಲ. ಯುಕ್ತಿಯಿಂದ ಕಾರ್ಯವಾಗದಿದ್ದರೆ ಶಕ್ತಿಯನ್ನು

ಉಪಯೋಗಿಸಿಯಾದರೂ ಕಾರ್ಯ ಮಾಡಿಕೊಳ್ಳಬೇಕಾದವನು. ಅನ್ಯಾಯದಿಂದ ರಾಜ್ಯವನ್ನು ನುಂಗಿ ನೀರು ಕುಡಿಯುವವರ ಗಂಟಿ ಲಕ್ಕ ಗಾಣವಾಗದಿದ್ದರೆ, ಅವರು ಕೇಳುವರೇ? ಮಂಗಳೇಶನಲ್ಲಿ ದುರ್ಬುದ್ಧಿಯು ಉದಯಿಸಿರುವದರಿಂದಲೆ ಸ್ವಾಮಿನಿಷ್ಠ ಅಧಿಕಾರಿಗಳ ಆಟವು ನಡೆಯದಾಗಿ, ಚಂದ್ರಸೇನನಂಥ ನೀಚ ಮನಸ್ಸಿನ ಜನರು ಹಿಲಗದಲ್ಲಿ ಹೆಚ್ಚಾಗತೊಡಗಿರುವರು" ಎಂದು ಪ್ರತಾಪವರ್ಮನು ನುಡಿದನು.

ಚಂದ್ರಸೇನನಿಗೆ ದೋಷವಿತ್ತ ಕೂಡಲೆ ವಿಜಯಾಂಬಿಕೆಯ ಮನಸ್ಸು ಹಿಂದು ಬಗೆಯಾಯಿತು; ಆದರೆ ಅವಳು ಈ ಸಾರೆ ಮಾತ್ರ ಯಾವ ಮಾತನಾಡಲೂ ಮುಂದುವರಿಯಲಿಲ್ಲ. ಇನ್ನು ಅದಿ ಪೇಚಾಟಕ್ಕೆ ಬಿದ್ದು ಹುಚ್ಚು ಮೈಮೇಲೆ ತೆಗೆದುಕೊಂಡು ಪಾರಾಗಬೇಕಾದರೇ ಸಾಕುಬೇಕಾಗಿರಲು, ಅವಳು ಮತ್ತೆ ಅಂತಹ ಸಾಹಸವನ್ನೇಕೆ ಮಾಡುವಳು?

ಚಂದ್ರಸೇನನು ಯಾರು? ಅವನಿಗೂ ವಿಜಯಾಂಬಿಕೆಗೂ ಪರಿಚಯವಿರಲು ಕಾರಣವೇನು? ಎಂಬುದನ್ನು ತಿಳಿಯುವದಕ್ಕಾಗಿ ವಾಚಕಮಹಾಶಯರ ಮನಸ್ಸು ಆತುರಪಡುತ್ತಿರಬಹುದಲ್ಲವೆ?

ರೇವತೀದ್ವೀಪದಲ್ಲಿ ಉಳಿದ ಲಾವಣ್ಯವತಿಯನ್ನು ಕರೆದುಕೊಂಡು ಬರುವದಕ್ಕೆ ಡೋಣಿಯನ್ನು ತೆಗೆದುಕೊಂಡು ಅಲ್ಲಿಗೆ ಬಂದಿದ್ದ ಸ್ವಾಮಿರಾಜನ ಪುತ್ರನಾದ ವೀರಸೇನನೇ ಮಂಗಳೇಶನ ಮಂತ್ರಿಯಾದ ಚಂದ್ರಸೇನನು. ಪುಲಿಕೇಶಿಯು ಗಾಯಗೊಂಡಿದ್ದ ಅವನನ್ನು ಎರಡು ದಿವಸ ಇಟ್ಟುಕೊಂಡು ಚನ್ನಾಗಿ ಉಪಚರಿಸಿ, ಸುರಕ್ಷಿತ ರೀತಿಯಿಂದ ಅಲ್ಲಿಂದ ಹೋಗಗೊಟ್ಟನು. ತನ್ನ ತಂದೆಯು ಶತ್ರುಗಳ ವಶನಾಗಿರುವನೆಂಬುದು ತಿಳಿದೊಡನೆಯೇ, ಅವನು ತಂದೆಯ ಬಿಡುಗಡೆಗಾಗಿ ಸಾಹಸ ನಡೆಯಿಸಿದನು ಕಡೆಗೆ ಅವನ ಪ್ರಯತ್ನಕ್ಕೆ ಯಶಪ್ರಾಪ್ತಿಯಾಗದೆ, ಸ್ವಾಮಿರಾಜನು ಮಂಗಳೇಶನ ಕ್ರೋಧಾಗ್ನಿಗೆ ಆಹುತಿಯಾದನು. ಸ್ವಾಮಿರಾಜನಿಗೆ ಕೊಲೆಯು

ಶಾಸನವು ವಿಧಿಸಲ್ಪಡುವಾಗ ಅಲ್ಲಿ ಒಂದು ವ್ಯಕ್ತಿಯು ಕ್ರುದ್ಧ ಮುಖ
ಚರ್ಯೆಯಿಂದ ನಿಂತುಕೊಂಡದ್ದು ವಾಚಕಮಹಾಶಯರ ಸ್ಮರಣೆ
ಯಲ್ಲಿರಬಹುದು. ಆ ವ್ಯಕ್ತಿಯೇ ಸ್ವಾಮಿರಾಜನ ಪುತ್ರನಾದ
ವೀರಸೇನನು.

ಭೀಷಣವಾದ ರೀತಿಯಿಂದ ತನ್ನ ತಂದೆಯು ಕೊಲೆ ಮಾಡಿಸಿದ್ದ
ಮಂಗಳೇಶನ ಸೇಡನ್ನು ತೀರಿಸಿಕೊಳ್ಳಬೇಕೆಂದು ವೀರಸೇನನು ತನ್ನ
ತಮ್ಮನಾದ ವಿಮಲಸೇನನೊಡನೆ ವಾತಾಪಿಪುರಕ್ಕೆ ಬಂದು ಮಂಗ
ಳೇಶನಲ್ಲಿ ಸೇವಾವೃತ್ತಿಯನ್ನು ಕೈಕೊಂಡಿದ್ದನು. ಅವನು ತನ್ನ
ಹೆಸರನ್ನು ಬದಲಿಸಿ ಚಂದ್ರಸೇನನೆಂಬ ಹೆಸರಿಟ್ಟುಕೊಂಡಿದ್ದನು;
ವಿಮಲಸೇನನು ನಯನಸೇನನೆಂದು ಅಭಿಧಾನವನ್ನು ಹೊಂದಿದ್ದನು.
ಈ ಉಭಯ ಬಂಧುಗಳು ತಮ್ಮ ಕರ್ತವ್ಯಪ್ರಭಾವದಿಂದಲೂ ಬುದ್ಧಿ
ಸಾಮರ್ಥ್ಯದಿಂದಲೂ ಒಳ್ಳೆಯ ಪ್ರಸಿದ್ಧರಾಗಿ, ಸ್ವಲ್ಪ ದಿವಸಗಳಲ್ಲೇ
ದೊಡ್ಡ ಅಧಿಕಾರಗಳನ್ನು ಹೊಂದಿದರು. ವೀರಸೇನನಂತು ಮಂತ್ರಿ
ಪದದ ಯೋಗ್ಯತೆಯನ್ನು ಪಡೆದಿದ್ದನು

ವಿಜಯಾಂಬಿಕೆಯು ಮಾತ್ರ ಚಂದ್ರಸೇನನನ್ನು ಗುರುತಿ
ಸಿದ್ದಳು. ಅವನಾದರೂ ತನ್ನ ಗುಪ್ತ ಕಾರಸ್ಥಾನಗಳನ್ನು ಅವಳಿಗೆ
ತಿಳಿಸಿದ್ದನು; ಹಾಗು ತನ್ನ ಗುಪ್ತ ವ್ಯೂಹವನ್ನು ಯಾರಿಗೂ ಹೇಳ
ಲಾಗದೆಂದು ಅವಳಿಂದ ಮಾತು ತೆಗೆದುಕೊಂಡಿದ್ದನು. ಅವನು ಕೂಡಿ
ದಾಗೊಮ್ಮೆ ಮಾನಸ ಭಗಿನಿಯಾದ ಅವಳಿಗೆ ಭೆಟ್ಟಿಯಾಗುತ್ತಿದ್ದನು.

ವೀರಸೇನನು ಒಳ್ಳೆಯ ಧೂರ್ತನಿದ್ದನು ಮಂಗಳೇಶನ
ಕೊಲೆಯನ್ನು ಈಡೇರಿಸುವದಕ್ಕಾಗಿ ಅವನು ಒಳ್ಳೆಯ ಸಾಹಸ ನಡೆ
ಸಿದ್ದನು ಅವನು ತನ್ನ ಕಾರಸ್ಥಾನವು ಯಾರಿಗೂ ತಿಳಿಯದಂತೆ
ಬಹಳೇ ಜಾಗ್ರತೆಯಿಂದ ನಡೆಯುತ್ತಿದ್ದನು. ಅವನು ಪುಲಿಕೇಶಿಯ
ಪಕ್ಷದವರ ದ್ರೋಹಚಿಂತನೆ ಮಾಡುತ್ತಿರುವಂತೆ ಬಾಹ್ಯತಃ ನಟಿಸು
ತ್ತಿದ್ದರೂ, ಅವನಿಂದ ಅವರಿಗೆ ಹಾನಿಯೊದಗುತ್ತಿರಲಿಲ್ಲ. ಒಟ್ಟಿನ
ಮೇಲೆ ಅವನು ಪುಲಕೇಶಿಯ ಪಕ್ಷದವರಿಗೆ ವ್ಯಾಘ್ರಮುಖ ಗೋಮಾ

ಗಿಯೂ ಮಂಗಳೇಶನ ಪಕ್ಷದವರಿಗೆ ಗೋಮುಖವ್ಯಾಘ್ರನಾಗಿಯೂ ಕಾಣತೊಡಗಿದ್ದನು!

---

## ಗುರೂಪದೇಶ.

ಚಾಲುಕ್ಯ ಸಾಮ್ರಾಜ್ಯದಲ್ಲಿ ಅಂತಃಕಲಹದ ಬೇಗೆಯು ರಭಸ ದಿಂದ ಬೆಳೆಯತೊಡಗಿತ್ತು. ಈ ಗೃಹಕಲಹದ ಪರ್ಯವಸಾನವು ಹೀಗೆ ತಾಗದೆಂದು ಜನರಿಗೆ ಗೊತ್ತಾಗಿತ್ತು. ಅಧಿಕಾರಾರೂಢನಾದ ಮಂಗಳೇಶನ ಪಕ್ಷವು ಪುಲಿಕೇಶಿಯ ಪಕ್ಷಕ್ಕಿಂತ ದೊಡ್ಡದಾಗುತ್ತ ನಡೆದಿತ್ತು. ರಾಜ್ಯದಲ್ಲಿ ನಾಲ್ಕು ಪಂಗಡಗಳಾಗಿದ್ದವು. ಕೇವಲ ಮಂಗಳೇಶನ ಪಕ್ಷದವರು; ಕೇವಲ ಪುಲಿಕೇಶಿಯ ಪಕ್ಷದವರು; ಯಾವ ಗೋಜಿಗೂ ಹೋಗದೆ ತಟಸ್ಥರಾಗಿ ಕುಳಿತವರು; ಪುಲಿಕೇಶಿಯ ಪಕ್ಷದವರಾಗಿದ್ದರೂ ಮಂಗಳೇಶನ ವಿರುದ್ಧವಾಗಿ ನಡೆಯುವ ಯೋಗ್ಯತೆಯಿಲ್ಲದವರು. ಹೀಗೆ ಬಣಗಳಾಗಿ ದೇಶವು ಸ್ವಲ್ಪ ದಿನಗಳಲ್ಲಿಯೇ ಸ್ಥಿತಿಗೆಟ್ಟಿತು. ಪುಲಿಕೇಶಿಯು ಹೊಲಗಕ್ಕೆ ಬಂದರೆ, ಮಂಗಳೇಶನಿಗೆ ಸಹನವಾಗುತ್ತಿದ್ದಿಲ್ಲವಾದ್ದರಿಂದ ಅವನು ಮನೆಯನ್ನು ಹಿಡಿದು ಸ್ವಸ್ಥವಾಗಿ ಕುಳಿತುಬಿಟ್ಟನು. ಅನಭಿಜ್ಞ ರಾಜಕಾರಣನೂ, ಚಿಕ್ಕ ವಯಸ್ಸಿನವನೂ ಆದ ಅವನು ಅಕಲ್ಪಿತವಾದ ಈ ವಿಪತ್ತಿನಿಂದ ಹೇಗೆ ಪಾರಾಗಬೇಕೆಂಬುದನ್ನು ತಿಳಿಯಲಾರದವನಾಗಿ ಗಾಬರಿಗೊಂಡನು. ಸತ್ಯವರ್ಮ-ಪ್ರತಾಪವರ್ಮರಂತಹ ಸ್ವಾಮಿನಿಷ್ಠ ಮುತ್ಸದ್ದಿಗಳ ಸತ್ವದ ಮೇಲೆಯೇ ಅವನ ಭವಿಷ್ಯವು ನಿಶ್ಚಯವಾಗತಕ್ಕದ್ದಾಗಿತ್ತು.

ಗೃಹಕಲಹಕ್ಕೆ ಪ್ರೋತ್ಸಾಹನೆ ಕೊಟ್ಟು ಮನಸ್ಸಿನಂತೆ ಫಲವು ದೊರೆಯುವ ಸಂಧಿಯನ್ನು ಚಂದ್ರಸೇನನು ಆತುರದಿಂದ ನಿರೀಕ್ಷಿಸುತ್ತಲಿದ್ದನು. ಅವನು ಮಂಗಳೇಶನಿಗೂ ವಿನಯಾಂಬಿಕೆಗೂ ಇಲ್ಲದ್ದೊಂದು ಬೋಧಿಸಿ, ಅವರ ಮನಸ್ಸು ಪುಲಿಕೇಶಿಯ ಹಾಗು ಅವನ ಪಕ್ಷದವರ ವಿಷಯಕ್ಕೆ ಮತ್ತಷ್ಟು ಕಠೋರವಾಗಬೇಕೆಂದು ಸಾಹಸ

ನಡೆಸಿದ್ದನು ಪ್ರತಾಪಸರ್ವ-ಶಿವದೇವರಲ್ಲಿಯು ದ್ವೇಷಾಗ್ನಿಯನ್ನು ಪ್ರಜ್ವಲಗೊಳಿಸುವದಕ್ಕೆ ಅವನು ಅನೇಕ ಬಗೆಯ ಯುಕ್ತಿಗಳನ್ನು ಮಾಡತೊಡಗಿದ್ದನು.

ಸಂಧ್ಯಾಕಾಲದ ಸಮಯವು. ಭಗವಾನ್ ಸಹಸ್ರರಶ್ಮಿಯು ಮಾರ್ಗಕ್ರಮಣದಿಂದ ದಣಿದುದರಿಂದ ಅವನ ಮುಖವು ಆರಕ್ತತೆಯನ್ನು ಹೊಂದಿತ್ತು. ದಿವಾಕರನ ಅಸ್ತಮಾನಕಾಲದ ಹೊಂಬಣ್ಣದ ಕಿರಣಗಳು ವಾತಾಪಿಪುರದ ಕೋಟೆಗೊತ್ತಳಗಳ ಮೇಲೆಯೂ, ಅಸಮಂತಾತ್ ಪ್ರದೇಶದ ಬನದ ಮೇಲೆಯೂ ಬಿದ್ದು, ಸೃಷ್ಟಿಸೌಂದರ್ಯದ ಮೋಹಕತೆಯನ್ನು ವ್ಯಕ್ತಪಡಿಸುತ್ತಲಿದ್ದವು. ವಸಂತಮಾರುತನು ವನಪ್ರದೇಶದಲ್ಲಿ ಸುಳಿಸುಳಿದು, ದೊರೆತ ಪುಷ್ಪಸುಗಂಧವನ್ನು ನಾಲ್ದೂಕಡೆಗ ಬೀರತೊಡಗಿದ್ದನು. ಆತಪದಿಂದ ಬಸವಳಿದ ಜನರಿಗೆ ವಾತಾಪಿಪುರದ 'ಮೇಲುಕೋಟೆ'ಯು ಕೊತ್ತಳವು ಹಳ್ಳಿಯ ಸುಖದಾಯಕವಾಗಿರುತ್ತಿತ್ತು. ಅಲ್ಲಿ ಅರಸು-ಅರಸಿಯರೂ, ಮಂತ್ರಿ-ಸೇನಾನಿಮಂಡಲದವರೂ ವಿಶ್ರಾಂತಿಗಾಗಿ ಓಲಗವ ಮುಗಿಸಿದೊಡನೆಯೆ ಬರುತ್ತಿದ್ದರು. ವಸಂತಮಾಸದ ಕಡುಬಿಲಿಸಿನ ತಾಪನಿವಾರಣೆಗಾಗಿ ಮಂಗಳೇಶನೂ, ಚಂದ್ರಸೇನ-ಶಿವದೇವರೂ ಮೇಲುಕೋಟೆಯ ಕೊತ್ತಳದಲ್ಲಿ ಬಂದಿದ್ದರು. ಕೆಲವು ಆಪ್ತಾಲೋಚನೆಯ ಮಾತುಗಳು ಜರುಗಬೇಕಾದುದರಿಂದ, ವಿನಯಾಂಬಿಕಾರಾಣಿಯಾದರೂ ಆಗಮಿಸಿದ್ದಳು.

"ಚಂದ್ರಸೇನ, ಪುಲಿಕೇಶಿಯ ಪಕ್ಷದವರು ಪ್ರಬಲರಾಗತೊಡಗಿರುವರು. ನಾನು ಈಗಲೆ ಪಟ್ಟಾಭಿಷಿಕ್ತನಾದರೆ ಬಂಡು ಏಳುವ ಲಕ್ಷಣವು ತೋರತೊಡಗಿರುವದು. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನಿರುವದು?"

"ಬಂಡಾಯದಂತಹ ಅಳ್ಳು ಬೆದರಿಕೆಗೆ ಸೊಪ್ಪು ಹಾಕುವಂತಹರು ನಿಮ್ಮ ಪಕ್ಷದಲ್ಲಿ ಯಾರಿಲ್ಲದಿದ್ದರೂ, ಹಳ್ಳಿಯ ಕುಶಲತೆಯಿಂದ ಈ ಕಾರ್ಯವನ್ನು ಸಾಧಿಸಬೇಕಾಗಿರುವದೇನೋ ನಿಜವು. ಆದಷ್ಟು

ಬೇಗನೆ ರಾಜ್ಯಾರೋಹಣದ ಸಮಾರಂಭವನ್ನು ಜರುಗಿಸುವದುತ್ತಮ ನೆಂದು ನನಗೆ ತೋರುತ್ತಲಿರುವದು. ಪುಲಿಕೇಶಿಯು ಪಕ್ಷದ ಜನ ರಲ್ಲಿ ಸತ್ಯಾಶ್ರಯ-ಪ್ರತಾಪವರ್ಷರಂತಹ ಕಾರಸ್ಥಾನಿಗಳು ಸೇರಿರುವ ದರಿಂದ ಈ ಶುಭಕಾರ್ಯಕ್ಕೆ ಬಲವಾಗಿ ಕಂಟಕವು ಬಾರದಂತೆ ಮಾಡಬೇಕಾದರೆ, ಬೇಗನೆ ಈ ಉತ್ಸವವನ್ನು ಆಚರಿಸಬೇಕು. ಹಾಗೆ ಮಾಡದಿದ್ದರೆ, ಅವರು ತಮ್ಮ ವಿರುದ್ಧವಾಗಿ ಗುಪ್ತಸಿದ್ಧತೆ ಯನ್ನು ಮಾಡಿಕೊಳ್ಳಬಹುದು.''

''ನಿಜವು; ಚಂದ್ರಸೇನರ ಮಾತು ಅಕ್ಷರಶಃ ನಿಜವು 'ಶುಭಸ್ಯ ಶೀಘ್ರಂ' ಎಂಬಂತೆ, ಬೇಗನೆ ಕಾರ್ಯ ಸಾಧಿಸತಕ್ಕದ್ದು. ಈ ಶಿವ ದೇವನಂತಹ ಸ್ವಾಮಿನಿಷ್ಠ ಸೇವಕನಿರುವ ವರೆಗೆ ಪುಲಿಕೇಶಿಯು ಪಕ್ಷದವರಿಗೆ ತಿಲಾಂಶವಾದರೂ ಬೆದರುವ ಕಾರಣವಿಲ್ಲ''ಎಂದು ಶಿವ ದೇವನು ಅಧ್ಯಕ್ಷತೆಯಿಂದ ನುಡಿದನು.

''ಇಷ್ಟರಲ್ಲಿ ಪುಲಿಕೇಶಿಯು ಮೇಲಿನ ಕಕ್ಕುಲತೆಯು ಹೋಗಿ ಲ್ಲವಾಗಿ ತೋರುವದು. ಹಾಗಿಲ್ಲದಿದ್ದರೆ, ಈ ಕಾರ್ಯಕ್ಕೆ ಇಷ್ಟು ಅವಕಾಶವೇ ದೊರೆಯುತ್ತಿರಲಿಲ್ಲ'' ಎಂದು ವಿನಯಾಂಬಿಕೆಯು ನುಡಿದು, ಪತಿಯನ್ನುದ್ದೇಶಿಸಿ:— ''ನಿಮಗೆ ನೀಚ ಪುಲಿಕೇಶಿಯು ಪಕ್ಷದವರ ಬೆದರಿಕೆ ಇದ್ದರೆ, ಇಲ್ಲವೆ ಪುಲಿಕೇಶಿಯಲ್ಲಿ ನೀವು ಅನುರಾಗವುಳ್ಳವರಾ ಗಿದ್ದರೆ, ಕುಮಾರ ಇಂದ್ರವರ್ಮನ ಹಾಗು ನಿಮ್ಮ ನಾಶವಾಗಬೇ ಕೆಂಬ ಬಯಕೆಯು ನಿಮ್ಮಲ್ಲಿದ್ದರೆ ಈ ಹವ್ಯಾಸಕ್ಕೆ ಹೋಗುವಂತಹ ಕಾರಣವಿಲ್ಲ.''

ಕರ್ಕಶತನದಿಂದ ನುಡಿದ ವಿನಯಾಂಬಿಕೆಯು ಮಾತುಗಳನ್ನು ಕೇಳಿ ಮಂಗಳೇಶನು ಮತ್ತಿಷ್ಟು ಹೇವಗೊಂಡನು. ಆಗ ಅವನು ಆವೇಶದಿಂದ:—

''ಏನು? ನಾನು ಅಂಜುಬುರುಕನೆಂದು ಭಾವಿಸುವೆಯಾ? ನನಗೆ ಪ್ರತ್ಯಕ್ಷ ಯಮನ ಭಯವು ಸಹ ಇರುವದಿಲ್ಲ. ನಾಳೆಗೇ ರಾಜ್ಯಾರೋಹಣ ಸಮಾರಂಭವನ್ನು ನೆರವೇರಿಸುವೆನು.''

ಮಂಗಳೇಶನ ನಿಶ್ಚಯಾತ್ಮಕ ಭಾಷಣದಿಂದ ಚಂದ್ರಸೇನನು ಬೆದರಿದನು. ಇಮ್ಮಡಿ ಪಟ್ಟಾಭಿಷೇಕ ಸಮಾರಂಭವು ಜರುಗುವದರಿಂದ, ಬಂಡಾಯವೆದ್ದು ಮಂಗಳೇಶನ ಪಕ್ಷದ ಜನರಿಂದ ಪುಲಿಕೇಶಿಯ ಜೀವಕ್ಕೆ ಅಪಾಯವು ತಟ್ಟುವದು ನಿಶ್ಚಯವೆಂದು ಅವನು ತಿಳಿದನು. ಮಂಗಳೇಶನ ವಧೆಯಾಗಬೇಕು; ಅನಂತರ ಇಂದ್ರವರ್ಮನಿಗೆ ರಾಜ್ಯಕಾರಭಾರವು ದೊರೆಯಬಾರದು. ತನ್ನ ಹಾಗು ಪುಲಿಕೇಶಿಯ ಜೀವರಕ್ಷಣೆಯಾಗಬೇಕು, ಎಂಬ ಉದ್ದೇಶವುಳ್ಳವನಾದ್ದರಿಂದ, ವಾತಾಪಿಪುರದಲ್ಲಿ ಪುಲಿಕೇಶಿಯಿರುವಾಗ ಬಂಡಾಯವೇಳಬಾರದೆಂಬ ಮನಸ್ಸುಳ್ಳವನಾಗಿದ್ದನು. ಆದ್ದರಿಂದಲೇ ಅವನ ಮಾತುಗಳಿಂದ ಚಂದ್ರಸೇನನ ಮನಸ್ಸಿನಲ್ಲಿ ಗೊಂದಲವೆದ್ದಿತು. ವಿಲಕ್ಷಣವಾದ ರೀತಿಯಿಂದ ಕಾರಸ್ಥಾನ ನಡೆಯಿಸಿ, ಈ ಯೋಗಾಯೋಗವನ್ನು ತರುವದಕ್ಕಾಗಿ ಅವನು ಯೋಚಿಸತೊಡಗಿದನು. ಕಡೆಗೆ ಅವನು ಏನೇನೋ ವಿಚಾರಿಸಿಕೊಂಡು ಮಂಗಳೇಶನನ್ನು ಕುರಿತು:--

"ಮಹಾರಾಜರೇ, ಮಹಾರಾಜ್ಞಿಯವರ ಮಾತಿನ ಕಡೆಗೆ ಲಕ್ಷ್ಯಗೊಟ್ಟು ಅಷ್ಟೊಂದು ಆತುರ ಪಡಬೇಡಿರಿ. ಉಗುರಿನಿಂದ ಹೋಗುವದಕ್ಕೆ ಕೊಡ್ಲಿಯನ್ನು ಉಪಯೋಗಿಸುವದು ಎಷ್ಟು ದಡ್ಡತನವೋ, ಅಷ್ಟೇ ನಗಗೇಡಾದ ಮಾತಾಗಿರುವದು. ರಾಜಕಾರಣದಲ್ಲಿ ಮಹಾರಾಜ್ಞಿಯವರಿಗೆ ಹೇಗೆ ತಿಳಿದೀತು? ಅವರು ತಮ್ಮ ಆತುರಸ್ವಭಾವಕ್ಕನುಸಾರವಾಗಿ ಮಾತನಾಡಿದ್ದರೂ, ರಾಜ್ಯದ ಹಿತಚಿಂತಕರಾದ ಮುತ್ಸದ್ದಿ ಜನರು ಸಾವಧಾನ ವಿಚಾರ ಮಾಡಬೇಕಾಗುವದು. ಸತ್ಯವರ್ಮ ಪ್ರತಾಪವರ್ಮರನ್ನು ಪೂರ್ಣಪದಚ್ಯುತ ಮಾಡಿದ ಹೊರತು, ಈ ಕಾರ್ಯವು ಸುಲಭಸಾಧ್ಯವಾಗಲಾರದು. ಆವರೀರ್ವರ ಕೈಯಲ್ಲಿ ಅಧಿಕಾರ ಸೂತ್ರಗಳಿರುವವರೆಗೆ ಪುಲಿಕೇಶಿಯ ಪಕ್ಷವು ನಿರ್ಬಲವಾಗಲಾರದು. ರಾಜದ್ರೋಹಿಗಳಾದ ಅವರನ್ನು ನಿವೃತ್ತರನ್ನು ಮಾಡುವದು ಅತ್ಯವಶ್ಯವಿರುವದು."

"ಚಂದ್ರಸೇನ, ನಿನ್ನ ಧೂರ್ತತನವು ಅವರ್ಣನೀಯವಿರುವದು,

ಪ್ರತಾಪವರ್ಮನನ್ನು ಅಧಿಕಾರಚ್ಯುತನನ್ನಾಗಿ ಮಾಡಿ ಅವನ ಸೈನ್ಯದ ಮೇಲೆ ನಮ್ಮ ಪಕ್ಷದೊಳಗಿನವನೊಬ್ಬ ಶೂರನನ್ನು ನಿಯಮಿಸ ಬೇಕು ಹೀಗೆ ಮಾಡಿದರೇನೇ ನಮ್ಮ ಕಾರ್ಯವು ನಿಷ್ಕಂಟಕ ವಾಗುವದು.''

"ನನ್ನ ಅಂಗರಕ್ಷಕನಾದ ನಯನಸೇನನು ಶೂರನಿರುವನು. ಅವನನ್ನು ಪ್ರತಾಪವರ್ಮನ ಸ್ಥಳದಲ್ಲಿ ನಿಯಮಿಸಬೇಕು'' ಎಂದು ಚಂದ್ರಸೇನನು ಹೇಳಿದ ಕೂಡಲೆ, ಮಂಗಳೇಶನು ಆನಂದದಿಂದ:—

"ಯೋಗ್ಯನಾದ ಮನುಷ್ಯನನ್ನು ಆರಿಸಿದೆ. ಅವನ ಶೂರ ತನವನ್ನು ನಾನು ಎಷ್ಟೋ ಸಾರೆ ನೋಡಿರುವೆನು. ನಮ್ಮ ವಿಷ ಯಕ್ಕೆ ಅವನು ಒಳ್ಳೆಯ ನಿಷ್ಠೆಯುಳ್ಳವನಿರುವನು. ಸೇನಾಪತಿಯ ವಸ್ತ್ರಗಳನ್ನು ಅವನಿಗೆ ಕೊಡುವದಕ್ಕೆ ಏನೂ ಅಡ್ಡಿಯಿಲ್ಲ ''

'ಚಂದ್ರಸೇನಾ! ಶಿವವರ್ಮರೇ! ನೀವು ವೃಥಾ ಕಾಲಹರಣ ಮಾಡಬೇಡಿರಿ. ಪಟ್ಟಮಹಿಷಿ ಎಂಬ ಜಂಬವು ಆ ಕ್ಷುದ್ರಮನೋ ವೃತ್ತಿಯವಳಾದ ವಿಜಯಾಂಬಿಕೆಯಲ್ಲಿ ಬಹಳವಾಗಿರುವದು ಅವ ಳನ್ನು ನನ್ನ ದಾಸಿಯದಾಸಿಯನ್ನಾಗಿ ಎಂದು ಮಾಡುವೆನೋ ಎಂಬಂ ತಾಗಿದೆ'ಎಂದು ವಿನಯಾಂಬಿಕೆಯು ನುಡಿದ ಕೂಡಲೆ ಚಂದ್ರಸೇನನ :

"ನಿಮ್ಮ ಮನೋದಯವು ಬೇಗನೆ ಸಿದ್ಧಿಸುವ ಲಕ್ಷಣವು ತೋರತೊಡಗಿದೆ. ಮಹಾರಾಜ್ಞಿಯವರೇ, ಈ ಕಾರ್ಯದಲ್ಲಿ ನಿಮ ಗಿಂತ ಸಾವಿರಾರು ಪಾಲು ಹೆಚ್ಚು ಆತುರತೆಯು ನಮ್ಮಲ್ಲಿ ನೆಲೆಗೊಂ ಡಿರುವದು ಒಳ್ಳೆಯ ಯುಕ್ತಿಯಿಂದ ಕಾರ್ಯವಾಗಬೇಕಾಗಿರುವದ ರಿಂದ ಚನ್ನಾಗಿ ವಿಚಾರ ಮಾಡಬೇಕಾಗಿರುವದು ''

"ಚಂದ್ರಸೇನಾ, ನಾನು ಮಹಾರಾಜ್ಞಿಯ ಪದವನ್ನು ಬೇ- ಗನೆ ಆರೋಹಿಸಬಹುದಲ್ಲವೆ? ಈ ಕಾರ್ಯದಲ್ಲಿ ಎಷ್ಟು ವಿಘ್ನಗಳೊ ದಗಿದರೂ ಅದರ ನಿವಾರಣೆ ಮಾಡುವದಕ್ಕೆ ನೀನೂ ಶಿವದೇವ ಸೇನಾ ಪತಿಗಳೂ ತತ್ಪರರಿರುವಿರಲ್ಲವೆ? ಚಂದ್ರಸೇನಾ, ಹೇಳು! ನಿಜವಾಗಿ ಹೇಳು! ನಾನು ಸ್ವಲ್ಪ ದಿನಗಳಲ್ಲಿ ಮಹಾರಾಜ್ಞಿಯಾಗುವೆನೆಂಬದನ್ನು

ನಿಶ್ಚಯವಾಣಿಯಿಂದ ಹೇಳು."

"ಮಹಾರಾಣಿಯವರೇ, ನಾನು ಹೆಚ್ಚು ಮಾತನಾಡಿದರೆ ಆತ್ಮಪೌರುಷದ ದೋಷವು ತಗಲಬಹುದು. ಅದ್ವಿತೀಯ ಚಾಣಕ್ಯ ತಂತ್ರದಿಂದ ಈ ಕಾರ್ಯದಲ್ಲಿ ನನ್ನ ಮನಸ್ಸಿನೊಳಗಿನ ಉದ್ದೇಶವನ್ನು ಸಾಧ್ಯಮಾಡಿಕೊಳ್ಳದಿದ್ದರೆ, ನಾನು ನನ್ನ ತಂದೆಯ ದ್ರೋಹಮಾಡಿದ ಅಧೋಗತಿಗೆ ಮುಟ್ಟೇನು"

ದ್ವಂದ್ವಾರ್ಥವನ್ನು ಬೋಧಿಸುವ ಚಂದ್ರಸೇನನ ಈ ಮಾತಿನ ಅರ್ಥವು ಯಾರಿಗೂ ಹೊಳೆಯಲಿಲ್ಲ ಎಲ್ಲರಿಗೂ ಅವನ ಮಾತಿನಿಂದ ಸಂಭ್ರಮವುಂಟಾಯಿತು. ವಿನಯಾಂಬಿಕೆಯ ಮುಖವು ಹಿಗ್ಗಿ ಇಷ್ಟು ಗಲವಾಯಿತು ಆಗ ಚಂದ್ರಸೇನನು ನಿಶ್ಚಯವಾಣಿಯಿಂದ:—

"ಮಹಾರಾಜರೇ, ಈ ಕಾರ್ಯದಲ್ಲಿ ತಾವು ನನ್ನ ಅಭಿಪ್ರಾಯದ ಮೇರೆಗೆ ನಡೆಯುವದಕ್ಕೆ ಸಿದ್ಧವಾಗಲಿಕ್ಕೇ ಬೇಕು ಅಂದರೆ ಕಾರ್ಯವು ನಿರ್ಬಾಧಕವಾಗಿ ಕೈಗೂಡುವದು. ನನ್ನ ಮೇಲೆ ಯಾವ ಬಗೆಯ ಅನುಮಾನಗಳು ಇರದಿದ್ದರೆ ಹಾಗೆ ಹೇಳಿರಿ. ಅಂದರೇನೇ ನಾನು ಈ ಸವ್ಯಾಸದಲ್ಲಿ ಮನಃಪೂರ್ವಕವಾಗಿ ಕೈಹಾಕುವೆನು"

"ಛೇ! ಹೀಗೇನು ಮಾತನಾಡುವೆ? ನನ್ನ ಹಿತಕ್ಕಾಗಿ ಯತ್ನಿಸುವ ನಿನ್ನಂತಹ ಸ್ವಾಮಿನಿಷ್ಠನ ಮೇಲೆ ಅವಿಶ್ವಾಸವೇ? ಇಂತಹ ಮಾತುಗಳನ್ನು ಇನ್ನೊಮ್ಮೆ ಅನಬೇಡ ನೀನೂ, ಶಿವದೇವ ಸೇನಾಪತಿಗಳೂ ನನ್ನ ಕೈಗಳಾಗಿರುವಿರಿ. ನಿಮ್ಮಿಬ್ಬರ ಮತದ ವಿರುದ್ಧವಾಗಿ ನಾನು ಎಂದೂ ಆಚರಿಸುವದಿಲ್ಲ"

"ಹಾಗಿದ್ದರೆ ಹೇಳುವೆನು ಕೇಳಿರಿ ನಾಳಿನ ದಿನ ಓಲಗದಲ್ಲಿ ಸತ್ಯವರ್ಮ-ಪ್ರತಾಪವರ್ಮರ ರಾಜದ್ರೋಹವನ್ನು ಚನ್ನಾಗಿ ವಿವರಿಸಿ ಹೇಳಿ, ಅವರನ್ನು ಕೆಲಸದಿಂದ ತಳ್ಳಬೇಕು; ಹಾಗೆ ಮಾಡಿದರೆ ಎಲ್ಲ ಜನರು ನಿಮ್ಮ ಈ ಕೃತಿಯನ್ನು ಚನ್ನಾಗಿ ಸಂಭಾವಿಸುವರು. ಪ್ರಸಂಗವೊದಗಿದರೆ ಅವರೀರ್ವರನ್ನು ಗಡಿಪಾರು ಮಾಡುವದಕ್ಕೆ ನಿಮ್ಮ ಮನಸ್ಸು ಸಿದ್ಧವಿರಬೇಕು; ಈ ವಿಷಯದಲ್ಲಿ ನೀವು ಯಾವ

ಬಗೆಯ ದಾಕ್ಷಿಣ್ಯವನ್ನೂ ಹಿಡಿಯತಕ್ಕದ್ದಲ್ಲ; ಹಾಗು ಪುಲಿಕೇಶಿಯನ್ನು ಕಾರಾಗೃಹದಲ್ಲಿಡುವದಕ್ಕೆ ನೀವು ಒಪ್ಪಿಕೊಳ್ಳಬೇಕು."

"ಚಂದ್ರಸೇನನ ಸೂಚನೆಯು ಅತ್ಯಂತ ಮಹತ್ವದ್ದಿರುವದು. ಅಂಗರಕ್ಷಕಪದದಿಂದ ಮಂತ್ರಿಪದವನ್ನಾರೋಹಿಸಬೇಕಾದರೆ, ಅವನ ಬುದ್ಧಿಕೌಶಲ್ಯವು ಸಾಮಾನ್ಯವಾದದ್ದೆಂದು ಯಾರು ಹೇಳುವರು? ಸತ್ಯವರ್ಮ-ಪ್ರತಾಪವರ್ಮರನ್ನು ಪದಚ್ಯುತರನ್ನಾಗಿ ಮಾಡಿದ ಹೊರತು ಮನೋಭೀಷ್ಟೆಯು ನಿರಾತಂಕವಾಗಿ ಸಾಧ್ಯವಾದೀತೆಂದು ಹೇಳುವದಕ್ಕೆ ಬರುವದಿಲ್ಲ. ಅವರೀಗ ನಿಜವಾಗಿ ರಾಜದ್ರೋಹಿಗಳಾಗಿರುವರು. ಅಂಥವರಿಗೆ ಶಾಸನವನ್ನು ವಿಧಿಸುವದಕ್ಕೆ ಹಿಂದೆ ಮುಂದೆ ನೋಡುವ ಕಾರಣವಿಲ್ಲ" ಎಂದು ವಿನಯಾಂಬಿಕಾದೇವಿಯು ಚಂದ್ರಸೇನನ ಮಾತಿಗೆ ಬಲಕೊಟ್ಟು ಮಾತನಾಡಿದಳು.

"ಮಹಾರಾಜರೇ, ನೀವು ಸ್ವೀಕೃತಕಾರ್ಯವನ್ನು ಎದೆಗುಂದದೆ ಕೊನೆಗಾಣಿಸುವಂತಹ ದೃಢನಿಶ್ಚಯದವರೂ, ಕಠೋರ ಹೃದಯಿಗಳೂ ಆಗಿದ್ದರೆ, ಈ ಕೆಲಸಕ್ಕೆ ಕೈಹಾಕಿರಿ. ಪ್ರಸಂಗವೊದಗಿದರೆ ಪುಲಿಕೇಶಿಯ ಮೇಲೆ ಸಹ ಶಸ್ತ್ರವೆತ್ತಬೇಕಾಗುವದೆಂಬ ಮಾತನ್ನು ಮರೆಯಬೇಡಿರಿ. ಅಂತಹ ಪ್ರಸಂಗವೊದಗಿದಾಗ ನೀವು ಅಂತಃಕರಣ, ಮಾಯಾ-ಮೋಹಗಳಿಗೆ ವಶರಾಗದೆ, ಅಂತಃಸ್ಪೃಶರಾಗಬೇಕಾಗುವದು ಹಾಗೆ ನಿಮ್ಮ ಮನಸ್ಸಿನ ಸಿದ್ಧತೆಯಿದ್ದರೇನೇ ಸೇವಕರಾದ ನಮ್ಮನ್ನು ಈ ಕೆಲಸದಲ್ಲಿ ತೊಡಗಿಸಿರಿ ಇಲ್ಲದಿದ್ದರೆ ಈ ಹವ್ಯಾಸಕ್ಕೆ ಹೋಗಬೇಡಿರಿ" ಎಂದು ಚಂದ್ರಸೇನನು ನುಡಿದ ಕೂಡಲೆ ಮಂಗಳೇಶನು:—

"ಚಂದ್ರಸೇನಾ, ನಾನು ಅತ್ಯಂತ ನಿಶ್ಚಲಲಕ್ಷ್ಯದವನಿರುವೆನು. ಸ್ವೀಕೃತಕರ್ತವ್ಯವನ್ನು ಕೊನೆಗಾಣಿಸುವಾಗ ನನಗೆ ಯಾವ ಬಗೆಯ ತೊಂದರೆಗಳೊದಗಿದರೂ ಅವುಗಳನ್ನು ಲೆಕ್ಕಿಸದಂತಹ ದೃಢಭಾವದವನೂ, ಕಠೋರ ವೃತ್ತಿಯುವನೂ ನಾನಿರುವೆನೆಂಬದನ್ನು ಹಿಂದಕ್ಕೆ ಸ್ವಾಮಿರಾಜನ ಕೊಲೆ ಮಾಡುವಾಗ ಜಗತ್ತಿನ ನಿದರ್ಶ

ನಕ್ಕೆ ತಂದುಕೊಟ್ಟಿರುವೆನು "
ಸ್ವಾಮಿರಾಜನ ಹೆಸರು ಹೊರಟ ಕೂಡಲೆ ಚಂದ್ರಸೇನನ ಮುಖವು ಸಂತಾಪದಿಂದ ಕೆಂಪಡರಿತು. ಆದರ ಕಡೆಗೆ ಯಾರ ಲಕ್ಷ್ಯವೂ ಹೋಗಲಿಲ್ಲ ಚಂದ್ರಸೇನನು ಗುರೂಪದೇಶದಿಂದ ಭಾಗ್ಯೋದಯದ ಮಾರ್ಗವನ್ನು ತೋರಿಸಿದನೆಂದು ಅವನನ್ನು ಸಹಾನುಭೂತಿಯಿಂದ ನೋಡುತ್ತಿರುವಾಗ, ಉಳಿದ ಘಟನೆಗಳ ಕಡೆಗೆ ಅವರ ಮನಸ್ಸು ಹೇಗೆ ಹೋಗಬೇಕು? ಮಂಗಳೇಶನಂತೂ ಮನೋ ರಾಜ್ಯದಲ್ಲಿ ಮಗ್ನನಾಗಿ ಹೋಗಿದ್ದನು!

---

## ಕುಟಿಲ ನೀತಿ.

ಪರಮಗುರುವಾದ ಚಂದ್ರಸೇನನ ಉಪದೇಶದಿಂದ ಮಂಗಳೇಶನ ಮನಸ್ಸು ಪುಲಿಕೇಶಿಯ ವಿಷಯಕ್ಕೆ ಪೂರ್ಣ ಕಲುಷಿತವಾಗಿತ್ತು. ಅವನನ್ನು ಸೆರೆಯಲ್ಲಿಟ್ಟು ಅವನ ಪರಿವಾರವನ್ನು ನಾಮಶೇಷ ಮಾಡ ಬೇಕೆಂದು ಅವನು ಸಾಹಸ ಮಾಡತೊಡಗಿದನು. ರಾಜ್ಯದ ವಿಷ ಯದಲ್ಲಿ ಬೇಸರಗೊಂಡವನಾಗಿ, ತನ್ನಿಂದ ತಾನೇ ಪದತ್ಯಾಗ ಮಾಡು ವಂತೆ ಅವನಿಗೆ ಉಪದ್ರವ ಕೊಡಬೇಕೆಂದು ಚಂದ್ರಸೇನನು ಮಂಗ ಳೇಶನಿಗೆ ಬೋಧಿಸಿದ್ದನು. ಚಂದ್ರಸೇನನ ಭಾವವು ಭಕ್ತಿಯುತ ವಾದದ್ದೂ, ಮನಸ್ಸು ಶುದ್ಧವಾದದ್ದೂ, ಆಚರಣೆಯು ಸರಳವಾ ದದ್ದೂ, ಧೂರ್ತತನವು ಅಲೌಕಿಕವಾದದ್ದೂ, ಬುದ್ಧಿಯು ಕುಶಾ ಗ್ರವಾದದ್ದೂ ಎಂಬದರ ಬಗ್ಗೆ ಮಂಗಳೇಶನಿಗೆ ಪೂರ್ಣ ನಂಬಿಗೆ ಯುಂಟಾಗಿದ್ದ ಮೇಲೆ, ಅವನ ಉಪದೇಶದಂತೆ ನಡೆಯುವದಕ್ಕೆ ಹಿಂದುಮುಂದೆ ನೋಡುವನೇಕೆ?

"ಎರಡು ತಾಸು ರಾತ್ರಿಯಾಗಿತ್ತು. ಮಂಗಳೇಶನು ಅಂತಃ ಪುರದಲ್ಲಿ ವಿನಯಾಂಬಿಕೆಯೊಡನೆ ಮಾತನಾಡುತ್ತ ಕುಳಿತಿದ್ದನು ಚತುರೋಪಾಯಗಳನ್ನು ಯೋಜಿಸಿ, ಪುಲಿಕೇಶಿಯಿಂದ ರಾಜ್ಯವನ್ನು

ತೀರಿದುಕೊಳ್ಳಬೇಕೆಂದು ಅವನು ನಿಶ್ಚಯಿಸಿಕೊಂಡಿದ್ದನು. ಪಟ್ಟ ಮಹಿಷಿಯಾಗಬೇಕೆಂಬ ಉತ್ಸುಕತೆಯು ವಿನಯಾಂಬಿಕೆಯಲ್ಲಿ ಅಭಿವೃದ್ಧಿಯನ್ನು ಹೊಂದುತ್ತ ನಡೆದಿತ್ತು. ಸಿಂಹಾಸನಾರೋಹಣಕ್ಕೆ ಪುಲಿಕೇಶಿಯು ಒಪ್ಪಿಕೆಯನ್ನಿತ್ತರೆ, ಬಲಾತ್ಕಾರದಿಂದಾಗುವ ಅತ್ಯಾಚಾರವನ್ನು ನಿಲ್ಲಿಸಿದಂತಾಗುವದೆಂದು ಆವಳು ವಿಚಾರ ಮಾಡಿ, ಅವನನ್ನು ಕರೆಯಿಸಿ, ಉಪಾಯದಿಂದ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂದು ಪತಿಗೆ ದುಂಬಾಲ ಬಿದ್ದಿದ್ದಳು. ಅವಳ ಯುಕ್ತಿಯು ಸಮಂಜಸವಾಗಿ ತೋರಿದ್ದರಿಂದ, ಮಂಗಳೇಶನು ಪುಲಿಕೇಶಿಯನ್ನೂ ವಿಜಯಾಂಬಿಕೆಯನ್ನೂ ಕರೆಯ ಕಳಿಹಿಸಿದ್ದನು.

ಮಂಗಳೇಶನ ನಿರೂಪದ ಮೇರೆಗೆ ಆ ದಂಪತಿಗಳು ಅಲ್ಲಿಗೆ ಬಂದ ಕೂಡಲೆ ಅವನು ಬಾಯಿಬಣ್ಣದ ಮಾತುಗಳನ್ನು ಸುರಿಸಿ, ಅವರ ಮನಸ್ಸನ್ನು ಒಲಿಸಿಕೊಳ್ಳುವ ಪ್ರಯತ್ನ ನಡೆಯಿಸಿದನು. ಕಕ್ಕನ ಹೃದಯವು ವಿಷಪೂರಿತವಿರುವದನ್ನು ನೋಡಿ, ಪುಲಿಕೇಶಿಗೆ ಪರಮಾವಧಿಯಾದ ದುಃಖವೆನಿಸಿತು. ಆಗ ಅವನು ಉದ್ವಿಗ್ನಮನಸ್ಕನಾಗಿ:—

"ಹೇಳಿರಿ! ಸ್ಪಷ್ಟವಾಗಿ ಹೇಳಿ ಬಿಡಿರಿ! ನಿಮ್ಮ ಮನಸ್ಸಿನೊಳಗಿನ ಗುಪ್ತಗೋಷ್ಟಿಗಳನ್ನು ಒಮ್ಮೆ ನನ್ನೆದುರಿನಲ್ಲಿ ಉಸುರಿಬಿಡಿರಿ!"

"ಪುಲಿಕೇಶೀ, ನಿನ್ನ ವಿಷಯಕ್ಕೆ ಸಾಮ್ರಾಜ್ಯದೊಳಗಿನ ಪ್ರಜೆಗಳ ಮನಸ್ಸು ಯಾವ ರೀತಿಯಿರುವದೆಂಬದರ ಕಲ್ಪನೆಯಾಗಿದೆಯೊ?" ಎಂದು ಮಂಗಳೇಶನು ದರ್ಪೋಕ್ತಿಯಿಂದ ವಿಚಾರಿಸಿದನು.

"ನನ್ನ ವಿಷಯದಲ್ಲಿ ಸಾಮ್ರಾಜ್ಯವಾಸಿಗಳು ಪೂಜ್ಯಬುದ್ಧಿಯುಳ್ಳವರಿರುವರೆಂಬದು ಮನೋಮನ ಸಾಕ್ಷಿಯಾದ ಮಾತಾಗಿರುವದು. ಕ್ಷುದ್ರಮನೋವೃತ್ತಿಯ ಗೃಹಭೇದಿಗಳ ಕೃಷ್ಣಕಾರಸ್ಥಾನಗಳಿಗೆ ಒಳಗಾದ ಸ್ವಾರ್ಥಿಜನರ ಮಾತು ಬೇರೆ. ಸದ್ಯಕ್ಕೆ ಪ್ರಸ್ತಾಪವೇಕೆ?"

"ನೀನು ಸಿಂಹಾಸನಾರೂಢನಾಗಿರುವದು ಸಾಮ್ರಾಜ್ಯಕ್ಕೆ ಅಹಿತಕರವೆನಿಸತೊಡಗಿರುವದು."

"ಇಲ್ಲ; ಮಹಾರಾಜರ ಸಿಂಹಾಸನಾರೋಹಣದಿಂದ ಪ್ರಜೆಗಳಿಗಾಗಲಿ, ಸಾಮ್ರಾಜ್ಯಕ್ಕಾಗಲಿ ಅಹಿತವಿಲ್ಲ; ನೀಚಸ್ವಾರ್ಥಿಗಳ ದುಷ್ಟ ಲಾಲಸೆಗೆ ಪ್ರತಿಬಂಧವಿರುವದರಿಂದ, ಅವರಿಗೆ ಮಾತ್ರ ಅಹಿತವೆನಿಸಿರಬಹುದು." ಎಂದು ವಿಜಯಾಂಬಿಕೆಯು ಸ್ಪಷ್ಟೋಕ್ತಿಯನ್ನಾಡಿದ ಕೂಡಲೆ, ಕರ್ಕಶಭಾವದ ವಿನಯಾಂಬಿಕೆಯು ತಲೆ ತಿರುಗಿತು. ಆಗ ಆವಳು ಕ್ರುದ್ಧಳಾಗಿ:—

"ರಾಜಕಾರಣದ ವಿಷಯದಲ್ಲಿ ನೀನು ಬಾಯಿ ಹಾಕುವ ಕಾರಣವಿಲ್ಲ. ಚಾಳುಕ್ಯ ಸಾಮ್ರಾಜ್ಯವನ್ನು ರಕ್ಷಿಸಬೇಕಾದರೆ ಮಹಾರಾಜರು ಎಷ್ಟು ಬಗೆಯಿಂದ ಶ್ರಮಗೊಂಡಿರುವರೆಂಬ ಮಾತು ನಿನ್ನೆ-ಮೊನ್ನಿನವಳಾದ ನಿನಗೆ ಹೇಗೆ ತಿಳಿಯಬೇಕು? ಅದರ ರಕ್ಷಣೆಗಾಗಿಯೇ ಅವರು ಯೋಗ್ಯ ಮಾರ್ಗವನ್ನು ಹುಡುಕ ತೊಡಗಿರುವರು. ಯಾವನಿಂದ ರಾಜ್ಯಕ್ಕೆ ನಷ್ಟವಿರುವದೋ, ಯಾವನ ಆಳಿಕೆಯು ಪ್ರಜಾಸಮ್ಮತವಿಲ್ಲವೋ, ಅವನು ಸಿಂಹಾಸನದ ಬಾಧ್ಯಸ್ತನಿದ್ದರೂ ಪದಚ್ಯುತನನ್ನಾಗಿ ಮಾಡುವದು ಒಂದು ಬಗೆಯ ರಾಷ್ಟ್ರಧರ್ಮವಾಗಿರುವದು."

"ಏನು ಮಾತಾಡುವಿರಿ? ಮಹಾರಾಜರ ಆಳಿಕೆಯು ಪ್ರಜೆಗಳಿಗೆ ಅಹಿತಕರವಾಗಿ ಪರಿಣಮಿಸಬಹುದೆ? ಅವರಿಂದ ಸಾಮ್ರಾಜ್ಯಕ್ಕೆ ನಾಶವುಂಟೆ? ಕ್ಷುದ್ರ ವಿಚಾರದಿಂದ ಇಲ್ಲದ ಆಕ್ಷೇಪಣೆಯನ್ನು ಮುಂದೆ ಮಾಡಿ ಸ್ವಾರ್ಥ ಸಾಧಿಸುವ ಹಂಚಿಕೆಯನ್ನು ಚನ್ನಾಗಿ ತೆಗೆದಿರುವಿರಿ. ಕೈಯಲ್ಲಿ ರಾಜ್ಯಸೂತ್ರಗಳಿರುವವೆಂಬ ಮದದಿಂದ ದಬ್ಬಾಳಿಕೆಯನ್ನು ಮಾಡುವ ದುಷ್ಟ ಅಧಿಕಾರಿಗಳ ನೀಚವೃತ್ತಿಗೆ ಧಿಃಕಾರ! ಧಿಃಕಾರ! ನೀವು ನನಗೆ ಇಲ್ಲದ ರಾಷ್ಟ್ರಧರ್ಮವನ್ನು ಬೋಧಿಸ ಬರಬೇಡಿರಿ. ಸ್ವಾರ್ಥಧರ್ಮಪ್ರೇರಿತರಾದ ನಿಮ್ಮ ಮನಸ್ಸು ಪಟ್ಟಮಹಿಷಿಯ ಪದವನ್ನು ಪಡೆಯುವದಕ್ಕಾಗಿ ಆತುರಗೊಂಡದ್ದರ ಮರ್ಮವನ್ನು ನಾನು ಬಲ್ಲೆ-ಚೆನ್ನಾಗಿ ಬಲ್ಲೆ!" ಎಂದು ವಿಜಯಾಂಬಿಕೆಯು ಸಂತಾಪದಿಂದ ನುಡಿದಳು:—"ಮಾವನವರೇ, ಈ ಬಗೆಯ ಅಸತ್ಯ

ಪ್ರವೃತ್ತಿಯಿಂದ ಜಯ ದೊರೆಯಲಾರದು. ಪಟ್ಟದ ಬಾಧ್ಯಸ್ಥನನ್ನು ಪದಚ್ಯುತ ಮಾಡಿ, ಸ್ವಾರ್ಥವನ್ನು ಸಾಧಿಸಿಕೊಂಡರೆ ಅದರ ಸೌಖ್ಯವು ನಿರಂತರವಾಗಿ ನಿಮಗೆ ದೊರೆಯಲಾರದು. ಅನ್ಯಾಕ್ರಾಂತಕೃತಿಯು ಅಸಹ್ಯವು. ಪರಮಾತ್ಮನು ಯಾವ ಕಾಲದಲ್ಲಿಯೂ ಜಾಗ್ರತ ನಿರುವನು. ಅವನ ಓಲಗದಲ್ಲಿ "ಸತ್ಯಮೇವ ಜಯತೆ" ಎಂಬ ಸಿದ್ಧಾಂತಕ್ಕೆ ನಿಶ್ಚಯವಾಗಿ ಯಶವು ದೊರೆಯುವದೆಂಬ ಮಾತನ್ನು ಸಂಪೂರ್ಣವಾಗಿ ಧ್ಯಾನದಲ್ಲಿಟ್ಟುಕೊಂಡು, ರಾಜದ್ರೋಹ-ದೇಶ ದ್ರೋಹದ ಕೃತ್ಯಗಳನ್ನು ಮಾಡಲಾರಂಭಿಸಿರಿ."

ವಿಜಯಾಂಬಿಕೆಯ ಈ ನಿಷ್ಠುರ ವಾಣಿಯಿಂದ ಮಂಗಳೇಶನ ಸಂತಾಪವು ಅನಿವಾರವಾಯಿತು. ನಿಗ್ರಹಾನುಗ್ರಹ ಶಕ್ತಿಸಂಪನ್ನ ನಾದ ತನ್ನ ಎದುರಿಸಲ್ಲಿಯೇ ಈ ಪರಿಯಾದ ಮಾನಕ್ಷಿತಿಕಾರಕ ಮಾತುಗಳಾಡಿದ್ದರಿಂದ, ಅವಳನ್ನು ಚನ್ನಾಗಿ ದಂಡಿಸಬೇಕೆಂದು ಅವನು ಹಾತೊರೆದನು. ತಾನು ಶಭಾವದನನಾದ ಅವನ ಕೈಯು ಟೊಂಕಕ್ಕೆ ಕಟ್ಟಿದ ಕಠಾರಿಯ ಕಡೆಗೆ ಹೋಗಿತ್ತು; ಆದರೆ ಮತ್ತೆ ಅವನಿಗೆ ಏನು ತಿಳಿಯಿತೋ-ಯಾರು ಬಲ್ಲರು! ಉಕ್ಕುತ್ತಿರುವ ಸಂತಾ ಪವನ್ನು ನುಂಗಿಕೊಂಡು ವಿಜಯಾಂಬಿಕೆಯನ್ನು ಕುರಿತು ಮಾರ್ಮಿಕ ತನದಿಂದ:—

"ನೀನು ಶತ್ರುಗಳ ಪುತ್ರಿಯಿದ್ದುದರಿಂದ ನನ್ನ ವಿಷಯಕ್ಕೆ ನಿನ್ನ ವೈರಭಾವವು ಹೇಗೆ ತೊಲಗುವದು? ಎಷ್ಟಾದರೂ ನೀನು ಅಬಲೆ ಯಿರುವೆ;-ಅನಭಿಜ್ಞಳಿರುವೆ. ಅಂತೆಯೇ ನಿನ್ನ ದುರ್ಭಾಷಣಗಳನ್ನು ಸಹಿಸುವೆನು" ಎಂದು ನುಡಿದು, ಅವನು ಪುಲಿಕೇಶಿಯನ್ನು ಕುರಿತು-

"ಪುಲಿಕೇಶೀ! ನನ್ನ ವರ್ತನವು ನಿನಗೆ ವಿಪರೀತವಾಗಿ ತೋರ ಬಹುದು; ಅದಕ್ಕೆ ಉಪಾಯವಿಲ್ಲದಾಗಿದೆ. ನಿನ್ನಲ್ಲಿ ರಾಜ್ಯಭಾರ ವನ್ನು ಹೊರುವ ಸಾಮರ್ಥ್ಯವು ಇಲ್ಲವೆಂಬದು ಪ್ರಜಾಜನರ ಮನ ವರಿಕೆಯಾಗಿದೆ. ಕೇವಲ ಜನೇಚ್ಛೆಗಾಗಿ ನಾನೀಗ ನಿನ್ನ ಮನಸ್ಸಿನ ವಿರುದ್ಧವಾಗಿ ನಡೆಯಬೇಕಾಗಿರುವದು. ನನ್ನ ಬಂಧುವಿನ ಪುತ್ರ

ನಾದ ನಿನ್ನಲ್ಲಿ ವೈರಭಾವವನ್ನು ತಳೆಯುವದಕ್ಕೆ ನಾನೇನು ಅಂತಹ ಕ್ಷುದ್ರಕೋಟಿಯೊಳಗಿನವನೆಂಬ ಭಾವನೆಗೆ ಆಸ್ಪದ ಕೊಡಬೇಡ. ನನ್ನ ಕರ್ತವ್ಯಪ್ರಭಾವದಿಂದ ಸಾಮ್ರಾಜ್ಯಕ್ಕೆ ಚಿರಸ್ಥಾಯಿತ್ವವು ಪ್ರಾಪ್ತವಾಗಿರುವದರಿಂದ, ನಾನು ನಿನಗಿಂತ ಎಷ್ಟೋಪಾಲು ಹೆಚ್ಚಾಗಿ ಪಟ್ಟಬಾಧ್ಯನಿರುವೆನು; ಆದರೆ ಸ್ಥಿರವಾಗಿ ನನ್ನ ಕೈಯಲ್ಲಿಯೇ ರಾಜ್ಯವನ್ನು ಇಟ್ಟುಕೊಳ್ಳುವೆನೆಂದು ನೀನು ಭಾವಿಸಬೇಡ. ರಾಜ್ಯಭಾರ ವಹಿಸಲಿಕ್ಕೆ ನೀನು ತಕ್ಕವನಾದೆಯೆಂಬದು ನನಗೂ ಪ್ರಜಾಜನರಿಗೂ ಮನವರಿಕೆಯಾದ ಕೂಡಲೆ, ನಿನ್ನ ರಾಜ್ಯವನ್ನು ನಿರ್ಬಾಧಕವಾಗಿ ನಿನ್ನ ವಶಕ್ಕೆ ಕೊಡುವೆನು. ಸಿಂಹಾಸನವನ್ನಾರೋಹಿಸಿ ಸಡಗರದಿಂದ ಮೆರೆಯಬೇಕೆಂದು ನನ್ನ ಮನೀಷೆಯಿಲ್ಲ ಕೇವಲ ನಿನ್ನ ಹಾಗು ಸಾಮ್ರಾಜ್ಯದ ಸೌಖ್ಯಕ್ಕಾಗಿ ನಾನೇ ಸಾರ್ವಭೌಮನೆಂದು ಸಾರಬೇಕಾಗಿರುವದು. ನಿನ್ನ ಕಾರ್ಯಭಾರದಲ್ಲಿ ಪ್ರಜೆಗಳ ಶಾಂತಿ ಸೌಖ್ಯಗಳಿಗೂ, ಐಕ್ಯಕ್ಕೂ ತೊಂದರೆಯುನ್ನೀಯುವ ಲಕ್ಷಣವು ತೋರಿದ್ದರಿಂದ ಈ ವಿಚಾರವನ್ನು ಮಾಡಿರುವೆನು. ನಾನು ಸಾರ್ವಭೌಮನಾಗುವದಕ್ಕೆ ನೀನು ಒಪ್ಪಲೇಬೇಕು. ಒಪ್ಪದಿದ್ದರೂ ನಾನು ನಿಶ್ಚಯವಾಗಿ ಸಾರ್ವಭೌಮನಾಗುವೆನು. ಪ್ರಜಾಹಿತಕ್ಕಾಗಿ ಹೆಣಗುತ್ತಿರುವ ನಿಸ್ಪೃಹವೃತ್ತಿಯವನಾದ ನನಗೆ, ನಿನ್ನದಾಗಲಿ ನಿನ್ನ ಅಲ್ಪಸಂಖ್ಯಾಕ ಪರಿವಾರದ್ದಾಗಲಿ ತಿಲಾಂಶವಾದರೂ ಭಯವಿಲ್ಲ ಸಾ-ಮೋಪಾಯದಿಂದ ಒಪ್ಪಿದರೆ ಒಳಿತು; ಇಲ್ಲದಿದ್ದರೆ ನಿರರ್ಥಕವಾಗಿ ಆತ್ಮನಾಶಮಾಡಿಕೊಂಡ ಅಪಯಶವು ಕಟ್ಟಿಡಲ್ಪಡುವದು. ಈ ಮಂಗಳೇಶನ ಬಾಹುಗಳು ನಿಸ್ಸತ್ವವಾಗಿಲ್ಲ; ಅವನ ತೀಕ್ಷ್ಣಧಾರೆಯ ಶಸ್ತ್ರಾಸ್ತ್ರಗಳು ಮೃದುತ್ವವನ್ನು ಹೊಂದಿರುವದಿಲ್ಲ; ಅವನ ಅಮೋಘ ಸೇನಾಬಲವು ನಿಷ್ಫಲವಿರುವದಿಲ್ಲ. ಪ್ರತಿಯೊಂದು ಸಂಗತಿಗಳ ಬಗ್ಗೆ ಸಾರಾಸಾರ ವಿಚಾರಿಸಿ ನಿನ್ನ ಅಭಿಪ್ರಾಯವನ್ನು ತಿಳುಹಿಸು. ನಾನು ನನ್ನ ಮನಸ್ಸಿನಂತೆ ಕಾರ್ಯಸಾಧನೆ ಮಾಡುವದಕ್ಕೆ ಹಿಂಜರಿಯುವವನಲ್ಲವೆಂಬ ಮಾತನ್ನು ಗಟ್ಟಿಯಾಗಿ ಮನದಲ್ಲಿ ಹಿಡಿದು

ಕೊಂಡು ನಿನ್ನ ಮತವನ್ನು ವ್ಯಕ್ತಪಡಿಸೆಂದರಾಯಿತು.''

ಮಂಗಳೇಶನ ಕುಹಕ ಬುದ್ಧಿಯನ್ನೂ, ಸ್ವಾರ್ಥಪರಾಯಣತೆಯನ್ನೂ, ನೀಚ ವೃತ್ತಿಯನ್ನೂ ನೋಡಿ ಪುಲಿಕೇಶಿಯು ಕ್ರೋಧಸಂತಪ್ತನಾದನು. ಮೊದಲಿನ ಸರಳಭಾವವೆಲ್ಲ ಅಳಿದು ಹೋಗಿ, ಇವನ ಮನಸ್ಸು ಸ್ವಾರ್ಥದ ಕಡೆಗೆ ಎಳೆದಿರುವದೆಂಬದು ಪುಲಿಕೇಶಿಗೆ ಗೊತ್ತಾಗಿದ್ದರೂ, ಅದರ ಪ್ರಭಾವವು ಇಷ್ಟು ಬೇಗನೆ ಹೊರಬೀಳಬಹುದೆಂದು ಅವನು ತಿಳಿದಿರಲಿಲ್ಲ. ಆಗ ಅವನು ಆವೇಶದಿಂದ:—

"ಚಿಕ್ಕಪ್ಪ, ಈಗ ಮಾತ್ರ ನೀವು ಪೂರ್ಣವಾಗಿ ಹಾದಿಯನ್ನು ಬಿಟ್ಟಿರಿ. ರಾಜ್ಯಸೂತ್ರಗಳು ಕೈಯಲ್ಲಿರುವವೆಂಬ ಹೆಮ್ಮೆಯಿಂದ ನೀವು ಈ ಬಗೆಯಾಗಿ ಮಾತನಾಡತೊಡಗಿರುವಿರಲ್ಲವೆ? ತಂದೆಯವರ ತರುವಾಯ ಪಿತೃಸ್ಥಾನದಲ್ಲಿ ನಿಮ್ಮನ್ನು ಕಲ್ಪಿಸಿ, ಭಯಭಕ್ತಿಯಿಂದ ನಡೆದುದರ ಪ್ರತಿಫಲವು ಚೆನ್ನಾಗಿ ದೊರೆಯಿತು. ಹಿಂದಕ್ಕೆ ಮಾತೃಸಮಾನರಾದ ದುರ್ಲಭದೇವಿಯವರೆದುರಿನಲ್ಲಿ ಮಾಡಿದ ಪ್ರತಿಜ್ಞೆಯನ್ನು ನೀವು ಪೂರ್ಣವಾಗಿ ಮರೆತಂತೆ ಕಾಣುತ್ತದೆ. ನೀಚಹೃದಯಿಗಳಿಗೆ ಸ್ವಾರ್ಥದ ಮುಂದೆ ಎಲ್ಲ ಧರ್ಮಗಳೂ ಹೇಯವಾಗಿ ತೋರುತ್ತಿದ್ದರೆ ಆಶ್ಚರ್ಯವಿಲ್ಲ; ಆದರೆ ನಿಮ್ಮಂತಹರಿಗೆ-ಭಾವೀ ಚಾಲುಕ್ಯ ಸಮ್ರಾಟಪದವನ್ನು ಬಯಸುವವರಿಗೆ-ಈ ವೃತ್ತಿಯು ಸಮಂಜಸವೆನಿಸುವದೇ? ನೀವು ನಿಜವಾಗಿ ಕೀರ್ತಿವರ್ಮತಾತರ ಅನುಜರಿರುವಿರೆಂಬದು ನನಗೀಗ ಸಂಶಯದ್ದಾಗಿ ಕಾಣತೊಡಗಿರುವದು. ನಿಮ್ಮಿಂದ ಚಾಲುಕ್ಯಸಾಮ್ರಾಜ್ಯಕ್ಕೆ ಸ್ಥೈರ್ಯವುಂಟಾದದ್ದು ನಿಜವು. ನೀವಿಲ್ಲದಿದ್ದರೂ ಮತ್ತೊಬ್ಬ ಸ್ವಾಮಿನಿಷ್ಠ ಮುತ್ಸದ್ದಿಯಿಂದ ಸಾಮ್ರಾಜ್ಯದ ರಕ್ಷಣೆಯಾಗುತ್ತಿತ್ತು. ರಾಜ್ಯರಕ್ಷಣೆ ಮಾಡಿದೆನೆಂಬ ನಿಮಿತ್ಯದಿಂದ ಅದನ್ನು ಗಿಳಂಕೃತ ಮಾಡಲಿಚ್ಛಿಸುವದು ನೀಚತನದ ಮಾತಲ್ಲವೆ? ನಿಮ್ಮ ಇಚ್ಛೆಯನ್ನು ನೆರವೇರಿಸುವದಕ್ಕೆ ನಾನು ಸಿದ್ಧನಿರುವದಿಲ್ಲ. ಹಾಗೆ ನಾನು ಮಾಡುವದರಿಂದ ಜಗತ್ತಿನಲ್ಲಿ ನಗೆಗೀಡಾಡುವ ಪ್ರಸಂಗವೊದಗೀತು.''

"ಪುಲಿಕೇಶಿ, ನೀನು ಯಾರ ಮುಂದೆ ಮಾತನಾಡುವೆಯೆಂಬದರ ಪರಿವೆಯಿದೆಯೆ? ನೀನು ಹೆಳ್ಳಿಯ ಮಾತಿನಿಂದ ಒಪ್ಪದಿದ್ದರೆ, ಬಲಾತ್ಕಾರದಿಂದ ಕಾರ್ಯವನ್ನು ಸಾಧಿಸಿಕೊಳ್ಳುವ ಸಾಮರ್ಥ್ಯವು ಈ ಮಂಗಳೇಶನಲ್ಲಿರುವದೆಂಬ ಮಾತನ್ನು ಮರೆಯಬೇಡ. ನನ್ನ ಕಾರ್ಯಕ್ಕೆ ವಿಘ್ನಬಗೆದೆಯಾದರೆ, ಆಮರಣವಾಗಿ ಕಾರಾಗೃಹವಾಸವನ್ನು ಭೋಗಿಸಬೇಕಾಗುವದು."

ಮಂಗಳೇಶನ ಮಾತುಗಳನ್ನು ಕೇಳಿ ಪುಲಿಕೇಶಿಯು ಕೆಂಡದಂತಾದನು. ವಿಜಯಾಂಬಿಕೆಯಂತೂ ಅವನ ಸ್ವಾರ್ಥೀವೃತ್ತಿಯನ್ನು ನೋಡಿ ಉರಿಯತೊಡಗಿದಳು. ಆ ವೀರ ಪತ್ನಿಯು ಹಳ್ಳಿಯ ಆವೇಶಯುಕ್ತವಾಣಿಯಿಂದ: –

"ನೀವೀಗ ಚಾಲುಕ್ಯ ಸಮ್ರಾಟನ ಮಾನ ಖಂಡನೆಯನ್ನು ಮಾಡಿ, ಅಪರಾಧಿಗಳಾದಿರಿ. ನಿಮಗೆ ನ್ಯಾಯಾಸನದ ಮುಂದೆ ಯೋಗ್ಯ ಶಾಸನ ವಿಧಿಸದ ಹೊರತು ಗತ್ಯಂತರವಿಲ್ಲ ನೀವು ಚಾಲುಕ್ಯ ಸಾಮ್ರಾಜ್ಯದ ಸೇವಕರಿದ್ದು, ಹೀಗೆ ಸಾಮ್ರಾಜ್ಯದ್ರೋಹವೆಸಗಿದ್ದರ ಪ್ರಾಯಶ್ಚಿತ್ತವು ಬೇಗನೆ ದೊರೆಯುವದು, ಪಟ್ಟಾಧಿಕಾರಿಗಳ ಅಧಿಕಾರವನ್ನು ಕೈಯಲ್ಲಿ ತೆಗೆದುಕೊಂಡು, ಸಾರ್ವಭೌಮರಾಗಬೇಕೆಂದು ಬಯಸುವ ನರಪಿಶಾಚಿಗಳಾದ ನೀವು ನಿಜವಾಗಿ ಅಧೋಗತಿಯನ್ನು ಹೊಂದುವಿರಿ."

ವಿಜಯಾಂಬಿಕೆಯ ಈ ಕಟುವಾಣಿಯನ್ನು ಕೇಳಿ ಮಂಗಳೇಶನ ಕೋಪವು ಅನಿವಾರವಾಯಿತು! ಆಗ ಅವನು ಹಲ್ಲುಕಡಿಯುತ್ತ:

"ಬುದ್ಧರಾಜಪುತ್ರೀ, ನೀನು ನಿನ್ನ ಕರ್ತವ್ಯಕ್ಷೇತ್ರವನ್ನು ಮೀರಿ ಮಾತನಾಡತೊಡಗಿದೆ ನಾನೀಗ ಚಾಲುಕ್ಯ ಸಮ್ರಾಟನಿರುವೆನೆಂಬದನ್ನು ನೀವೀರ್ವರು ಮರೆತು, ಮನಬಂದಂತೆ ಮಾತನಾಡಿದ್ದಕ್ಕಾಗಿ ಬೇಗನೆ ಶಾಸನವು ದೊರೆಯುವದು!"

"ನೀವು ಅಂತಃಕರಣ-ಮಾಯೆಗಳಿಗೀಡಾಗಿ ಸ್ವಕೀಯಭಾವವನ್ನು ತೋರಿಸುತ್ತ ಹೋದಂತೆ, ಈ ಮದಾಂಧರು ಮೈಮೇಲೆ

ಬರುತ್ತಾರೆ. ಇವರೀರ್ವರನ್ನೂ ಕಾರಾಗೃಹದಲ್ಲಿರಿಸಿದ ಹೊರತು, ನಿಮಗೆ ಸಮ್ರಾಟಪದದ ಮಾನವು ದೊರೆಯದೆಂದು ನಿಶ್ಚಯವಾಗಿ ತಿಳಿಯಿರಿ. ನೀವು ವೃಥಾ ಕಾಲಹರಣ ಮಾಡಿ, ರಾಜ್ಯಾರೋಹಣ ಸಮಾರಂಭವನ್ನು ಮುಂದೆ ಹಾಕತೊಡಗಿರುವಿರಿ. ನೀವು ಕಾಲಕ್ಷೇಪ ಮಾಡಿದಂತೆ ಈ ಪುಲಿಕೇಶಿಯು ಪರಿವಾರವು ಅಜಿಂಕ್ಯವಾಗುತ್ತ ನಡೆಯುವದೆಂಬದು ನಿಮ್ಮ ಲಕ್ಷ್ಯದಲ್ಲಿ ಬರಲೊಲ್ಲದು. ಹಾಕಿರಿ; ಈಗಲೇ ಈ ಕುಲಾಂಗಾರನನ್ನು ಕಾರಾಗೃಹದಲ್ಲಿ!"

ವಿನಯಾಂಬಿಕೆಯು ಹೀಗೆ ನುಡಿದ ಕೂಡಲೆ ಪುಲಿಕೇಶಿಗೆ ಬಹಳೇ ದುಃಖವೆನಿಸಿತು. ಆಗ ಅವನು ತಿರಸ್ಕಾರದಿಂದ:—

"ಮಾತೇ! ನೀವು ಸದಯಹೃದಯಿಗಳೆಂಬದನ್ನು ಇಂದು ಮನಗಂಡೆನು ಮಗನನ್ನು ಕಾರಾಗೃಹದಲ್ಲಿರಿಸಿ, ಸೌಖ್ಯಪಡೆಯಲಿಚ್ಛಿಸುವ ನಿಮ್ಮಂತಹ ಮಾತೆಯರ ಧನ್ಯವಾದನೆಯನ್ನು ಎಷ್ಟು ಬಗೆಯಿಂದ ಮಾಡಿದರೂ ಕಡಿಮೆಯಾಗುವದು ಅಮೃತವನ್ನುಣಿಸಿದ ಕೈಯಿಂದ ವಿಷ ಉಣಿಸಲುದ್ಯುಕ್ತಳಾದ ಪ್ರೇಮಳಹೃದಯದ ಮಾತೇ! ಪಟ್ಟಮಹಿಷಿಯಾಗುವ ಸಂಭ್ರಮದಲ್ಲಿ ಪುತ್ರನ ಪರಿವೆಯಿಲ್ಲವಲ್ಲವೆ? ಧಿಃಕಾರ! ಧಿಃಕಾರ! ನಿಮ್ಮ ಸ್ವಾರ್ಥೀಹೃದಯಕ್ಕೆ ಶತಶಃ ಧಿಃಕಾರ!"

ಪುಲಿಕೇಶಿಯ ಸಿಂಹಗರ್ಜನೆಯಿಂದ ವಿನಯಾಂಬಿಕೆಯು ಬೆದರಿದಳು. ಅವನ ಮಾರ್ಮಿಕ ವಾಗ್ಬಾಣಗಳು ಮಂಗಳೇಶನ ಕಠೋರ ಹೃದಯವನ್ನು ಚನ್ನಾಗಿ ಭೇದಿಸಿದವು ಆಗ ಅವನು ಸೌಮ್ಯತನದ ಸೋಗಿನಿಂದ:—

"ತಮ್ಮಾ, ಪುಲಿಕೇಶಿ, ನೀನು ವೃಥಾ ಸಂತಾಪಗೊಳ್ಳಬೇಡ. ನಾನು ಸಿಂಹಾಸನಾರೂಢನಾಗುವದು ಕೇವಲ ನಿನ್ನ ಹಿತಕ್ಕೆ; ಚಾಲುಕ್ಯಸಾಮ್ರಾಜ್ಯದ ಹಿತಕ್ಕೆ. ಜನರ ಅಭಿಪ್ರಾಯವು ಬೇರೆ ತರಹದ್ದಾಗಿರುವದರಿಂದ, ಅವರ ಮನಸ್ಸಿನ ಸಮಾಧಾನಕ್ಕಾಗಿ ನಾನು ಹೀಗೆ ಮಾಡಬೇಕಾಗಿರುವದು. ನೀನು ರಾಜ್ಯಭಾರವನ್ನು ನಿರಾತಂಕವಾಗಿ ನಡೆಸುವೆಯೆಂಬ ನಂಬಿಗೆಯಾಯಿತೆಂದರೆ, ಮತ್ತು ಪ್ರಜೆ

ಗಳ ಅನುರಾಗಕ್ಕೆ ನೀನು ಪಾತ್ರನಾದೆಯೆಂದರೆ, ಬಾಧ್ಯಸ್ಥನಾದ ನಿನ್ನ ಕೈಯಲ್ಲಿಯೇ ರಾಜ್ಯಸೂತ್ರಗಳನ್ನು ಕೊಡುವೆನು."

"ಬಲ್ಲೆನು; ನಿಮ್ಮ ಕುಟಿಲನೀತಿಯ ಮರ್ಮವನ್ನು ನಾನು ಪೂರ್ಣವಾಗಿ ಬಲ್ಲೆನು. ಗೋಮುಖ ವ್ಯಾಘ್ರರಂತಿರುವ ನಿಮ್ಮ ಮಾತಿನ ಮೇಲೆ ವಿಶ್ವಾಸವಿಡುವಂತಹ ಅಪ್ರಬುದ್ಧನು ನಾನಿಲ್ಲ. ನನ್ನ ವಿಷಯಕ್ಕೆ ಪ್ರಜೆಗಳಲ್ಲಿರುವ ಪೂಜ್ಯಭಾವವನ್ನು ನಾಶಗೊಳಿಸಿ, ನನ್ನ ಪಕ್ಷದ ಜನರನ್ನು ದಂಡಿಸಿ, ನನ್ನನ್ನು ಕಾರಾಗೃಹದಲ್ಲಿರಿಸಿ, ಸಿಂಹಾಸನಾರೋಹಣ ಸಮಾರಂಭವನ್ನು ನೆರವೇರಿಸಬೇಕೆಂಬುವ ನಿಮ್ಮ ದೀರ್ಘಸಾಹಸವನ್ನು ನಾನು ಪರೀಕ್ಷಿಸಬೇಕಾಗಿದೆ."

"ಹೀಗೇನು? ಪುಲಿಕೇಶೀ! ನೀನು ಅಂತಹ ಶೂರನೇ ಇರುವೆ? ನಿನ್ನ ಮನಸ್ಸು ಮಾತ್ರ ನಿನ್ನ ಕೈಯಲ್ಲಿಲ್ಲ. ಪ್ರೇಮಳಭಾವದ ನನ್ನ ವಿಷಯಕ್ಕೆ ನಿನ್ನ ಕಲ್ಪನೆಯು ವಿಪರೀತವಾದಂತೆ ತೋರುವದು."

"ನಿಮ್ಮ ಕಾರಸ್ಥಾನಗಳನ್ನು ನಾನು ಅರಿತವಳಾಗಿರುವೆನು. ಸತ್ಯವರ್ಮ-ಪ್ರತಾಪವರ್ಮರನ್ನು ಪದಚ್ಯುತಿಗೊಳಿಸಿ, ನಮ್ಮಿರ್ವರನ್ನೂ ಕಾರಾಗೃಹದಲ್ಲಿಟ್ಟು, ಪಟ್ಟಾಭಿಷೇಕ ಮಾಡಿಸಿಕೊಳ್ಳಬೇಕೆಂದು ನಿಮ್ಮ ಮಹತ್ವಾಕಾಂಕ್ಷೆಯಿರುವದಲ್ಲವೆ? ಇದೇ ವಿಷಯಕ್ಕೆ ಇಂದು ಸಾಯಂಕಾಲದಲ್ಲಿ ನಿಮ್ಮ ಚರ್ಚೆಯು ನಡೆದಿರಲಿಲ್ಲವೆ? ನನ್ನ ಮಾತಿನ ನಿಜತ್ವಕ್ಕೆ ಮೇಲುಕೋಟೆಯ ಬುರುಜೇ ಸಾಕ್ಷಿಯಿರುವದು. ಯಾಕೆ? ಸುಮ್ಮನಾದಿರಿ?" ಎಂದು ವಿಜಯಾಂಬಿಕೆಯು ನುಡಿಯಲು, ತಮ್ಮ ಗುಪ್ತ ವಿಚಾರಗಳನ್ನೆಲ್ಲ ಇವಳು ಕೇಳಿರುವಳೆಂಬದು ಮಂಗಳೇಶನಿಗೆ ಗೊತ್ತಾಯಿತು. ತನ್ನ ಕುಟಿಲನೀತಿಯ ಉಪಯೋಗವು ತಿಲಾಂಶವಾದರೂ ಆಗದ್ದರಿಂದ, ಅವನು ಭಗ್ನಮನೋರಥನಾದನು!



# ನೌಕರಶಾಹಿಯ ಹಗಲವಾಡಿ!

"ಚಂದ್ರಸೇನಾ! ನಾಲಿಗೆಯನ್ನು ಬಿಗಿಹಿಡಿದು ಮಾತನಾಡು! ಮನಬಂದಂತೆ ಮಾತನಾಡಿದರೆ ಅದರ ಪರಿಣಾಮವು ಭಯಂಕರ ವಾಗುವದೆಂಬದನ್ನು ಮರೆಯಬೇಡ."

"ಸತ್ಯವರ್ಮ! ನಿನ್ನ ಪೊಳ್ಳು ಬೆದರಿಕೆಗೆ ಸೊಪ್ಪು ಹಾಕುವ ದಕ್ಕೆ ನಾವೇನು ಅಂಜುವ ಹೇಡಿಗಳಲ್ಲ. ನಿನ್ನಲ್ಲಿ ಅಂತಹ ರಾಜನಿಷ್ಠೆ ಯೂ, ಮುತ್ಸದ್ದಿತನವೂ ಇರುತ್ತಿದ್ದರೆ, ಮಹಾರಾಜರು ಚಂದ್ರಸೇ ನರಿಗೆ ಮಂತ್ರಿಪದವಿಯನ್ನೇ ಈಯುತ್ತಿರಲಿಲ್ಲ"

"ಶಿವವರ್ಮ! ಅವರವರ ವಾದದಲ್ಲಿ ನೀನು ಬಾಯಿಹಾಕುವ ಕಾರಣವಿಲ್ಲ"

"ಪ್ರತಾಪವರ್ಮಾ! ಇಲ್ಲಿ ನಿನ್ನ ಅಧ್ಯಕ್ಷತೆಯೇಕೆ? ಚಾಲುಕ್ಯ ಸಾಮ್ರಾಜ್ಯಕ್ಕೆ ನಿನ್ನ ಹಾಗು ಸತ್ಯವರ್ಮನ ಸಂಬಂಧವು ಬೇಗನೆ ಕಡಿದು ಹೋಗುವ ಕಾಲವು ಬಂದಿದೆ" ಎಂದು ಚಂದ್ರಸೇನನು ದರ್ಪೋಕ್ತಿಯಿಂದ ನುಡಿದು, ಗಹಗಹಿಸಿ ನಗುತ್ತ ಶಿವವರ್ಮನನ್ನು ಕುರಿತು:—

"ಸೇನಾಪತಿಗಳೇ, ಪುಲಿಕೇಶಿಯ ಪರಿವಾರದ ಜನರ ಮುಖ ಗಳು ಈಗ ರಾಹುಗ್ರಸ್ತಚಂದ್ರನಂತೆ ಕಾಣುತ್ತಿರುವವಲ್ಲವೆ? ಮಂಗ ಳೇಶ ಮಹಾರಾಜರು ಇನ್ನು ಬೇಗನೆ ಸಿಂಹಾಸನವನ್ನೇರುವರು. ರಾಜನಿಷ್ಠೆಯಿಂದ ನಡೆಯುವವರ ಭಾಗ್ಯಕ್ಕೆ ಬೆಲೆಯಿಲ್ಲದಾಗುವದು. ರಾಜದ್ರೋಹಿಗಳಾದ ಇಂತಹ ಜನರ ಅಟ್ಟಹಾಸವು ನಿಂತು, ಅವರ ವರ ಪಾಪಕ್ಕೆ ತಕ್ಕ ಪ್ರತಿಫಲವು ದೊರೆತೇ ದೊರೆಯುವದು. ಅದ ಕ್ಕಾಗಿ ನಾವೇಕೆ ಕಂಠಶೋಷಣೆ ಮಾಡಿಕೊಳ್ಳಬೇಕು?"

ಚಂದ್ರಸೇನನ ಮಾತುಗಳಿಂದ ಸತ್ಯವರ್ಮನು ಮತ್ತಷ್ಟು ರೋಷಗೊಂಡನು ಸಿಟ್ಟಿನಿಂದ ಅವನ ಶರೀರವು ನಡುಗತೊಡಗಿತು. ಕಣ್ಣುಗಳು ಬೆಂಕಿಯನ್ನು ಕಾರುತ್ತಿರುವಂತೆ ಕಾಣತೊಡಗಿದವು.

ಪ್ರಳಯಕಾಲದ ರುದ್ರನಂತೆ ಅವನು ಭೀಕರನಾಗಿ ತೋರತೊಡಗಿದನು. ಅವನು ತನ್ನ ತೀಕ್ಷ್ಣಧಾರೆಯ ಖಡ್ಗವನ್ನು ಹಿರಿದು:—

"ಚಂದ್ರಸೇನಾ, ಚಾಲುಕ್ಯಸಿಂಹಾಸನದ ವಿಷಯಕ್ಕೆ ಅಭಿಮಾನವುಳ್ಳ ಈ ಸ್ವಾಮಿನಿಷ್ಠನಿಗೆ ರಾಜದ್ರೋಹಿಯೆನ್ನುವ ನಿನ್ನ ನಾಲಿಗೆಯನ್ನೇ ಶೀಳುತ್ತೇನೆ" ಎಂದು ಆರ್ಭಟಿಸಿ, ಚಂದ್ರಸೇನನ ಮೇಲೇರಿ ಹೋದನು. ಚಂದ್ರಸೇನನಾದರೂ ತನ್ನ ಖಡ್ಗವನ್ನು ಝಳಪಿಸುತ್ತ ಮುಂದುವರೆದನು. ಆಗ ಪ್ರತಾಪವರ್ಮ-ಶಿವವರ್ಮರು ಈರ್ವರನ್ನೂ ಸಂತೈಸಿದರು. ಆಗೆ ಪ್ರತಾಪವರ್ಮನು ಚಂದ್ರಸೇನನನ್ನು ಕುರಿತು:—

"ಚಂದ್ರಸೇನಾ, ಸ್ವಾಮಿನಿಷ್ಠಜನರ ಹೃದಯಕ್ಕೆ ಈ ಪರಿಯಾಗಿ ಗಾಯಗೊಳಿಸುವದು ಉಚಿತವಲ್ಲ ಸತ್ಯವರ್ಮರು ಚಾಲುಕ್ಯಸಿಂಹಾಸನದಲ್ಲಿಯೂ ಆ ಸಿಂಹಾಸನದ ನಿಜವಾದ ಬಾಧ್ಯಸ್ಥರಲ್ಲಿಯೂ ಪೂರ್ಣಭಕ್ತಿಯಿಂದಿರುವದಕ್ಕೆ ಈ ಕರ್ನಾಟಕ ಭೂಮಾತೆಯೇ ಸಾಕ್ಷಿಭೂತಳಾಗಿರುವಳು. ಮಂಗಳೇಶರ ಸ್ವಾರ್ಥೀಹೃದಯವು ಸಾಮ್ರಾಜ್ಯವನ್ನು ವಿಪರೀತಸ್ಥಿತಿಗೆ ಹಚ್ಚಬೇಕೆಂದು ಹಾತೊರೆಯತೊಡಗಿರುವದು. ದೇಶದ್ರೋಹಿಗಳ ಹಾಗು ರಾಜದ್ರೋಹಿಗಳ ಆಟವು ಬಹುದಿನ ನಡೆಯುತ್ತಿರುವದಿಲ್ಲ. ರಾಷ್ಟ್ರಘಾತಕಿಗಳ ಘಾತುಕಕೃತಿಗೆ ಅಂಜಿ 'ನಮೋ-ನಮೋ' ಅನ್ನುವಷ್ಟು ಕ್ಲೈಬ್ಯತನವು ಸಾಮ್ರಾಜ್ಯದ ಸ್ವಾಮಿನಿಷ್ಠಜನರಲ್ಲಿ ವಾಸಿಸಿರುವದಿಲ್ಲ. ಕಡೆಗೆ ಸತ್ಯಕ್ಕೇ ವಿಜಯವಾಗಿ, ದ್ರೋಶದ್ರೋಹಿಗಳು ಸಂಪೂರ್ಣವಾಗಿ ನಾಶಗೊಳ್ಳುವದು ನಿಶ್ಚಯವು!"

"ಪ್ರತಾಪವರ್ಮ! ಧರ್ಮಾಧರ್ಮದ ಬಣ್ಣದ ಮಾತುಗಳನ್ನು ಸುರಿಸಬೇಡ. ನಿನ್ನ ಪುಲಿಕೇಶಿಯಲ್ಲಿ ಅಂತಹ ಪರಾಕ್ರಮವು ವಾಸಿಸುತ್ತಿದ್ದರೆ ಹೆಂಗಳೆಯರಂತೆ ಮನೆಹಿಡಿದು ಕುಳಿತುಕೊಳ್ಳುತ್ತಿರಲಿಲ್ಲ"

"ದುಷ್ಟಾ! ಇಕೋ, ರಾಜನಿಂದೆಯನ್ನು ಮಾಡುವ ನಿನ್ನ ಈ ಶಿರಸ್ಸನ್ನು ಈಗಲೆ ಭೂಮಿಗೆ ಕೆಡಹುವೆನು!" ಎಂದು ಪ್ರತಾಪ

ವರ್ಮನು ಶಿವವರ್ಮನ ಮೇಲೆ ಸಾಗಿದನು.

"ಪ್ರತಾಪವರ್ಮರೇ, ಸಹಿಸಿರಿ. ಶಿವವರ್ಮರಿಗೆ ನಾನು ಹೇಡಿಯಾಗಿ ಕಾಣುತ್ತಿರಬಹುದು; ಹೆಂಗಳೆಯಂತೆ ತೋರಿರಬಹುದು. ಸಾಮ್ರಾಜ್ಯದ ಪರಿಸ್ಥಿತಿಯು ಹೀಗಾಗಲಿಕ್ಕೆ ನನ್ನ ಕಕ್ಕಂದಿರಾದ ಮಂಗಳೇಶರೇ ಕಾರಣರಲ್ಲದೆ, ನೀವು ಚಂದ್ರಸೇನರ ಮೇಲಾಗಲಿ, ಶಿವವರ್ಮರ ಮೇಲಾಗಲಿ ವೃಥಾ ಕೋಪ ಮಾಡಲಾಗದು. ಮುಂದೆ ಸಾಮ್ರಾಜ್ಯವು ಯಾವ ಯಾವ ಸ್ಥಿತಿಗೆ ಮುಟ್ಟುವದೆಂಬದನ್ನು ಈಗಲೆ ತರ್ಕಿಸಲಸಾಧ್ಯವು ಸ್ವಾರ್ಥಿಗಳ ಹಾವಳಿಯಿಂದ ಸಾಮ್ರಾಜ್ಯವೃಕ್ಷದ ಬೇರುಗಳು ಸಡಿಲಿರುವವು. ಚಂಡಮಾರುತನ ಹೊಡತದಿಂದ ಯಾವಾಗ ಉರುಳಿ ಅನರ್ಥವೊದಗುವದೆಂಬದು ಸದ್ಯಕ್ಕೆ ತಿಳಿಯುವಂತಿಲ್ಲದಿದ್ದರೂ ಚಾಲುಕ್ಯ ಸ್ವರಾಜ್ಯಸೂರ್ಯನಿಗೆ ಅಸ್ತಮಯಕಾಲವು ಬರುವದೆಂಬ ಭಯವು ಪೂರ್ಣವಾಗಿ ಬಾಧಿಸತೊಡಗಿದೆ. ಮಂಗಳೇಶರ ಹಾಗು ಅವರ ಪರಿವಾರದ ಜನರ ನಾಶವು ಎಂದಾಗುವದೋ ಅಂದೇ ಸಾಮ್ರಾಜ್ಯಕ್ಕೆ ಸ್ಥೈರ್ಯವುಂಟಾಗುವದು!" ಎಂದು ಪುಲಿಕೇಶಿಯು ಅಲ್ಲಿಗೆ ಬಂದು ನುಡಿದ ಕೂಡಲೆ, ಶಿವವರ್ಮನ ಮುಖವು ಹಿಂದು ತರಹವಾಯಿತು ಪ್ರತಾಪವರ್ಮನು ತನ್ನ ಖಡ್ಗವನ್ನು ಹಿರೆಯಲ್ಲಿರಿಸಿ:—

'ಮಹಾರಾಜರೇ, ಹಿಮ್ಮೆ ಸೋಕ್ಷ-ಮೋಕ್ಷವಾಗಿ ಹೋಗಲಿ. ಈ ರಾಜದ್ರೋಹಿಗಳ ವಿಟಂಬನೆಯನ್ನು ಎಲ್ಲಿಯ ವರೆಗೆ ಸಹಿಸುವದು?'

"ಜೋಕೆ! ಪ್ರತಾಪಾ, ಎಚ್ಚರದಿಂದ ಮಾತನಾಡು! ರಾಜದ್ರೋಹಿಗಳಾರೆಂಬದರ ನಿದರ್ಶನವು ಬೇಗನೆ ಆಗಬಹುದಾಗಿದೆ. ಅದಕ್ಕಷ್ಟು ಆತುರಪಡುವ ಅವಶ್ಯಕತೆ ಇಲ್ಲ" ಎಂದು ಶಿವವರ್ಮನು ಕ್ರೋಧಯುತನಾಗಿ ನುಡಿದ ಕೂಡಲೆ, ಪುಲಿಕೇಶಿಯ ಸಂತಾಪವು ಅನಿವಾರವಾಯಿತು. ಅವನು ಆವೇಶದಿಂದ:—

"ಶಿವವರ್ಮರೇ, ಯಾವನೊಬ್ಬನು ಅನ್ಯರ ಸ್ವತ್ತಿನ ಮೇಲೆ ಅನ್ಯಾಯದಿಂದ ಸ್ವಾಮಿತ್ವ ನಡೆಯಿಸಿದ್ದರೆ, ಸ್ವಾಭಿಮಾನಶೂನ್ಯರಾಗಿ

ಅವನಲ್ಲಿ ಭಕ್ತಿಯುತರಾಗಿರಬೇಕೆಂದು ನಿಮ್ಮ ಆಶಯವಿದ್ದಂತಾಯಿತು. ನಿಜವಾದ ಬಾಧ್ಯಸ್ಥರಾರು? ಅವರನ್ನು ದುರ್ಬಲಗೊಳಿಸಿ, ಪರಾಕ್ರಮದ ಮದದಿಂದ ಅನ್ಯಾಕ್ರಾಂತ ಮಾಡಲೆಳೆಸಿದವರಾರು? ಎಂಬದರ ಸಾರಾಸಾರ ವಿಚಾರವಿಲ್ಲದೆ, ಅಂಧಶ್ರದ್ಧೆಯನ್ನಿಡುವದು ಎಷ್ಟು ಆತ್ಮಘಾತುಕವೋ, ಅಷ್ಟೇ ಅಧೋಗತಿ ಸಾಧಕವೂ ಆಗಿರುವದು. ಯಾಕೆ, ಚಂದ್ರಸೇನರೇ! ಹೊಸದಾಗಿ ಮಂತ್ರಿಪದವನ್ನು ಹೊಂದಿದ ಉಬ್ಬಿನಲ್ಲಿ ನಿಮ್ಮ ಕಣ್ಣುಗಳು ಮಂಜಾಗಿರಬಹುದು; ಬುದ್ಧಿಯು ಭ್ರಮಿಸಿರಬಹುದು; ಕರ್ತವ್ಯ-ತಾರತಮ್ಯಗಳ ಜ್ಞಾನವು ನಷ್ಟಪ್ರಾಯವಾಗಿರಬಹುದು ಕೇವಲ ಧನಾಶೆಗಾಗಿ ಅವಿಂಥರ ಸೇವೆ ಮಾಡುವದರಿಂದ ನಿಮ್ಮನ್ನು ನೀವೇ ಘಾತಿಸಿಕೊಳ್ಳುವದಲ್ಲದೆ, ದೇಶದ ಸ್ಥಿರವಾದ ಹಾನಿಯನ್ನು ಮಾಡುವದಕ್ಕೆ ಪ್ರವೃತ್ತರಾದಂತಾಗುವದಿಲ್ಲವೆ? ಸ್ವಾರ್ಥೀ ಮನೋಬುದ್ಧಿಯು ಎಂದೂ ತಾರಕವೆನಿಸದೆ, ಅದು ನಿಶ್ಚಯವಾಗಿ ಮಾರಕವಿರುವದೆಂಬ ಮಾತು ಸದಸದ್ವಿವೇಕ ವಿಚಾರಿಗಳಾದ ನಿಮಗೆ ಹೊಳೆಯದಿದ್ದರೆ, ನೀವು ಮಂತ್ರಿಪದವನ್ನು ಹೊಂದುವದಕ್ಕೆ ಪೂರಾ ಅನರ್ಹರಿರುವರೆಂದು ಹೇಳದಿರೆನು. ಕಡೆಗೆ ಸತ್ಯಕ್ಕೇ ವಿಜಯವಾಗಿ ದೇಶನಾಶ, ರಾಷ್ಟ್ರನಾಶ ಮೊದಲಾದ ಘೋರ ಕೃತಿಗಳಿಗೆ ಕಾರಣೀಭೂತರಾದ ನಿಮಗೆ ಯೋಗ್ಯ ಪ್ರಾಯಶ್ಚಿತ್ತವು ಇಹಲೋಕದಲ್ಲಿಯೇ ದೊರೆಯುವದಲ್ಲದೆ, ಪರಮಾತ್ಮನ ಓಲಗದಲ್ಲಿಯಾದರೂ ಕೃತಪಾಪದ ಬಗ್ಗೆ ತಕ್ಕ ಶಾಸನವು ದೊರೆಯದಿರದು. ಧನಾಶೆಗಾಗಿ ಎಂತಹ ನೀಚ ಕೃತಿಗಳನ್ನಾದರೂ ಮಾಡಲಿಕ್ಕೆ ಹೇಸದ ನಿಮ್ಮಂತಹ ನರಾಧಮರನ್ನು ಸೃಷ್ಟಿಸಿದ್ದು, ಪರಮಾತ್ಮನದೇ ಅನ್ಯಾಯವಿರುವದು. ಬುದ್ಧರಾಜನೊಡನೆ ಹಿಡಿದುದಕ್ಕಾಗಿ ಕೊಂಕಣದ ಮಂಡಲೇಶನಾದ ಸ್ವಾಮಿರಾಜನಿಗೆ ಯಾವ ಬಗೆಯ ಪ್ರಾಯಶ್ಚಿತ್ತವು ದೊರೆಯಿತೆಂಬದು ದಿಗ್ದರ್ಶನವಿರುತ್ತಿರಲು, ಮತ್ತೆ ಅಂತಹ ಅಪರಾಧಗಳನ್ನು ಮಾಡುವ ನಿಮಗೆ ಏನೆನ್ನಬೇಕೋ ತಿಳಿಯದಾಗಿದೆ''

ಪುಲಿಕೇಶಿಯು ಹೀಗೆ ನುಡಿದೊಡನೆಯೇ ಚಂದ್ರಸೇನನ ಮುಖಲಕ್ಷ್ಯ

ಣವು ವಿಲಕ್ಷಣವಾದದ್ದರಲ್ಲಿ ಸಂದೇಹವಿಲ್ಲ. ಆಗ ಅವನು ಯಾವ ಬಗೆಯ ವಿಕಾರಗಳನ್ನೂ ಸ್ಪಷ್ಟವಾಗಿ ತೋರಗೊಡದೆ, ಗಂಭೀರತೆಯಿಂದ:—

"ಯಾವನು ರಾಜದ್ರೋಹ ಮಾಡುವನೋ ಅವನಿಗೆ ಆ ಬಗೆಯ ಶಾಸನವು ನಿಶ್ಚಯವಾಗಿ ಒದಗುವದೆಂಬದು ತ್ರಿಕಾಲಾಬಾಧಿತವಾದ ಮಾತಾಗಿರುವದು. ನಾವು ಇಷ್ಟು ಸಣ್ಣ ಧರ್ಮಶಾಸ್ತ್ರವನ್ನು ಅರಿಯದಂತಹ ಮೂಢಮತಿಗಳಿರುವದಿಲ್ಲ. ಅನ್ಯರ ಸ್ವತ್ತಿಗೆ ಯಾರು ಕೈ ಹಾಕಿರುವರೋ, ಯಾರು ಸಾಮ್ರಾಜ್ಯದಲ್ಲಿ ಒಡಕಿನ ದುರ್ಗಂಧವನ್ನು ಪಸರಿಸುತ್ತ ನಡೆದಿರುವರೋ, ಯಾರು ಕರ್ನಾಟಕಭೂಮಾತೆಯ ದ್ರೋಹಚಿಂತನೆಯನ್ನು ಮಾಡುತ್ತಲಿರುವರೋ ಅವರ ಶಿರವನ್ನು ಹರಿದು ನೆತ್ತರವನ್ನು ಕುಡಿಯದಿದ್ದರೆ, ಈ ಚಂದ್ರಸೇನನು ತಾಯಿಯ ದ್ರೋಹ ಚಿಂತನೆ ಮಾಡಿದ ಅಧೋಗತಿಯನ್ನು ಹೊಂದುವನು! ಒಡಕು ಹುಟ್ಟಿಸುವವರ ಅನ್ಯಾಕ್ರಾಂತ ಮಾಡಲೆಳಿಸುವವರ ಕಳೇವರಗಳು ಅತ್ಯಂತ ಭೀಷಣವಾದ ರೀತಿಯಿಂದ ವಾತಾಪಿಪುರದ ಅಗಸೇಬಾಗಿಲಿಗೆ ತೂಗಹಾಕಲ್ಪಡತಕ್ಕವಿರುವವು. ಮಹಾರಾಜರೇ! ಈ ನನ್ನ ಕಾರ್ಯಕ್ಕೆ ಪ್ರತ್ಯಕ್ಷ ಬ್ರಹ್ಮದೇವನು ಸಹ ಅಡ್ಡಾಗಲಾರನೆಂದು ನನ್ನ ನಿರ್ಮಲ ಮನೋದೇವತೆಯು ಭವಿತವ್ಯವನ್ನು ಸೂಚಿಸುತ್ತಲಿರುವದು" ಎಂದು ಚಂದ್ರಸೇನನು ಪ್ರತಿಜ್ಞಾಪೂರ್ವಕವಾದ ವಾಣಿಯಿಂದ ನುಡಿದು, ತನ್ನ ಮಾತಿನ ಅರ್ಥವು ಬೇರೆ ತರಹದ್ದಾಗಿ ಒಮ್ಮೆಲೆ ಪರಿಣಮಿಸಬೇಕೆಂದು:—

"ಯಾರು ಚಾಲುಕ್ಯ ಸಾಮ್ರಾಜ್ಯಕ್ಕೆ ದ್ರೋಹ ಸವೆಸಿರುವರೋ ಅವರಿಗೆ ಒಡೆತನವಲ್ಲದೆ, ನಿನ್ನೆ ಮೊನ್ನಿನವರಾದ ನೀವು ರಾಜ್ಯಾರಾಜ್ಯವೆಂದರೆ ಆಗುವದೇನು? ವ್ಯರ್ಥವಾಗಿ ದಣಿಯಬೇಡಿರಿ. ನಿಮ್ಮ ಕಕ್ಕಂದಿರಿಗೆ ಶರಣಾಗತರಾದಿರೆಂದರೆ, ಯಾವದೊಂದು ಪ್ರಾಂತದ ಮಂಡಲಾಧೀಶರಾಗುವ ಸಂಧಿಯು ನಿಶ್ಚಯವಾಗಿ ಒದಗುವದು. ನಿಮ್ಮ ಪರಿವಾರಕ್ಕಾದರೂ ಸೌಖ್ಯವು ದೊರೆಯಬಹುದು. ಸತ್ಯ

ಶರ್ಮ-ಪ್ರತಾಪರೇ, ಬರಿಗೈಧನಿಯು ಬೆನ್ನು ಹತ್ತುವದರಿಂದ, ಯಾವ ಭಾಗ್ಯವು ಲಭಿಸುವದೆಂದು ಆತುರಗೊಂಡಿರುವಿರಿ? ನಿಸ್ಪೃಹವೃತ್ತಿಯು ನನ್ನ ಮೇಲೆ ಯಾವ ದೋಷವನ್ನೂ ಇಡಬೇಡಿರಿ. 'ಸತ್ಯಕ್ಕೆ ವಿಜಯ'ವೆಂಬ ನಾಣ್ಣುಡಿಯು ವಜ್ರಲೇಪದಂತಿರುವದು. ನಿಮ್ಮ ಹಿತಕ್ಕಾಗಿ ಒಂದೆರಡು ಮಾತುಗಳನ್ನು ಹೇಳಿರುವೆನು. ಉದ್ಧಾಮತನವಾಚರಿಸಿದನೆಂದು ಕ್ರೋಧಗೊಳ್ಳಬಾರದು."

"ಇದರಲ್ಲಿ ಉದ್ಧಾಮತನವೇನು? ಚಂದ್ರಸೇನರೇ, ನಿಜವಾಗಿ ವಿಚಾರಿಸಿದರೆ, ಪುಲಿಕೇಶಿ ಮಹಾರಾಜರಾದರೂ ಅಪರಾಧಿಗಳ ಮಾಲಿಕೆಯಲ್ಲಿ ಬರುವರು. ಕ್ರಾಂತಿಕಾರಕರ ಮುಖಂಡರೆಂದು ಇವರಿಗೆ ಅನ್ನುವದಕ್ಕೆ ಪ್ರತ್ಯವಾಯವೇನು? ಇವರ ಸೂತ್ರದಿಂದಲೆ ದೇಶದಲ್ಲಿ ರಾಜದ್ರೋಹದ ಚಲನವಲನವು ನಡೆದಿರುವದು. ಸ್ವಭಾವದಿಂದ ಸದ್ಗುಣಗಳಿದ್ದುದರಿಂದಲೇ ಇವರ ಅಪರಾಧಕ್ಕೆ ಇದುವರೆಗೆ ಕ್ಷಮೆಯು ದೊರೆತಿರುವದು. ಅಲ್ಪ ಸಂಖ್ಯಾಕ ಮರುಳ ಜನರನ್ನು ಕೂಡಿಕೊಂಡು ಒಂದು ಪಂಗಡವನ್ನೆಬ್ಬಿಸಿದ ಇವರು ನಿಜವಾಗಿಯೂ ಅಪರಾಧಿಗಳು."

"ಶಿವಶರ್ಮರೇ, ನಿಜವು; ನಿಮ್ಮ ಮಾತು ಅಕ್ಷರಶಃ ನಿಜವು" ಎಂದು ಚಂದ್ರಸೇನನು ನುಡಿದೊಡನೆಯೇ ಪುಲಿಕೇಶಿಯು:—

"ಚಾಲುಕ್ಯ ಸಮ್ರಾಟನಾದ, ಚಾಲುಕ್ಯ ಪ್ರಜಾವತ್ಸಲನಾದ ಚಾಲುಕ್ಯಮಾತೆಯು-ಕರ್ನಾಟಕ ಮಾತೆಯ-ವಿಷಯದಲ್ಲಿ ಭಕ್ತಿಭಾವವುಳ್ಳವನಾದ ಈ ವೀರ ಪುಲಿಕೇಶಿಯು ಅಪರಾಧಿಯೇ? ಕ್ರಾಂತಿಕಾರಕನೆ? ನರಾಧಮಾ! ಶಿವಶರ್ಮಾ! ನಿನ್ನ ಆಯುಷ್ಯದ ಪರಿಮಿತಿಯು ಸಂಪೂರ್ತಿಯಾದಂತೆ ತೋರುವದು. ಚಾಲುಕ್ಯಸಮ್ರಾಟನಿಗೆ ಈ ಬಗೆಯಾಗಿ ಅಪಮಾನ ಮಾಡಿದೆಯಾ? ಅಧಿಕಾರ ಮದಾಂಧಾ, ಕುಲಾಂಗಾರಾ, ಇನ್ನು ನಿನ್ನ ಪಂಗಡವು ಜಾಗ್ರತೆಯಿಂದಿರಲಿ!"

"ಸ್ವಾರ್ಥೀ ನೌಕರಶಾಹಿಯು ಹಗಲುವಾಡಿಯಲ್ಲಿ ಸಮ್ರಾಟನೂ ಪ್ರಜೆಗಳೂ ಅಪರಾಧಿಗಳೇ! ರಾಜನಿಷ್ಠರು-ದೇಶಭಕ್ತರೆಂದರೆ

ಇವರೇ! ತಾಯಿಯ ಹೊಟ್ಟೆಯಿಂದ ಜನ್ಮಿಸಿ, ತಾಯಿಯನ್ನೇ ಕೊ-ಲ್ಲುವ ವೃಶ್ಚಿಕ ಜಾತಿಯವರಾದ ಇವರೇ ರಾಜನಿಷ್ಠರು!"

"ಮಹಾರಾಜರ ಬಳಿಯಲ್ಲಿರುವನೆಂಬ ಭರದಿಂದ ಮನಬಂದಂತೆ ಗಳಹಲುದ್ಯುಕ್ತನಾದೆಯಾ?" ಎಂದು ಶಿವವರ್ಮನು ಸತ್ಯವರ್ಮನಿಗೆ ನುಡಿಯಲು,

"ನಾನೆಲ್ಲಿಯ ಮಹಾರಾಜನು? ನಾನೊಬ್ಬ ಅಪರಾಧಿಯಲ್ಲವೆ? ಮಂತ್ರಿ-ಸೇನಾನಾಯಕರೇ, ಹಾಕಿರಿ ನನ್ನನ್ನು ಕಾರಾಗೃಹದಲ್ಲಿ! ಮದಾಂಧರೇ, ನೀವು ಇಷ್ಟು ನೀಚಕೋಟಿಗೆ ತಲುಪಬಹುದೆಂದು ನನಗೆ ತಿಳಿದಿರಲಿಲ್ಲ. ಆಗಲಿ, ನಿಮ್ಮ ಮಂಗಳೇಶ ಮಹಾರಾಜರ ಪರಾಕ್ರಮದ ಬಣ್ಣವು ಹೊರಬೀಳಲಿ!"

ಎಂದು ಪುಲಿಕೇಶಿಯು ನುಡಿದು, ಅಲ್ಲಿಂದ ತೆರಳಿದನು. ಸತ್ಯವರ್ಮ-ಪ್ರತಾಪವರ್ಮರಾದರೂ ಅವನ ಬೆನ್ನು ಹತ್ತಿ ನಡೆದರು. ಅವರು ಅನೇಕ ಬಗೆಯ ವಿಚಾರದಲ್ಲಿ ಮುಳುಗಿದ್ದರಿಂದಲೂ ಮನಸ್ಸು ಅತ್ಯಂತ ವ್ಯಗ್ರವಿದ್ದುದರಿಂದಲೂ ಮೌನರಾಗಿದ್ದರು. ನೌಕರಶಾ-ಹಿಯ ಹಗಲವಾಡಿಯು ಸಂಪೂರ್ಣವಾಗಿ ಹೇಗೆ ನಾಶವಾದೀತೆಂಬ ವಿಚಾರದಲ್ಲಿ ಅವರು ಮುಳುಗಿದ್ದರು. ಜನ್ಮಸಿದ್ಧವಾದ ಅಧಿಕಾರವನ್ನು ಆಕ್ರಮಿಸಿ, ಪಾರತಂತ್ರ್ಯದಲ್ಲಿ ಕೆಡಹಿ, ದಬ್ಬಾಳಿಕೆಯನ್ನು ಮಾಡುತ್ತ ತಮ್ಮ ಅಟ್ಟಹಾಸವೇ ಆಚಂದ್ರಾರ್ಕವಾಗಿ ನಡೆಯಬೇಕೆನ್ನುವ ದುರಾಕಾಂಕ್ಷೆಯ ಮಂಗಳೇಶನ ಸ್ವಭಾವಕ್ಕೂ ಅವನ ಕೈ-ಕೆಳಗಿನ ಲಾಂಗೂಲಚಾಲಕ ಅಧಿಕಾರಿವರ್ಗಕ್ಕೂ ಯಾವ ಸಾಮ್ಯಕೊಡಬೇಕೆನ್ನುವದನ್ನು ಚಾಣಾಕ್ಷ ವಾಚಕರ ಮೇಲೆಯೇ ಬಿಟ್ಟು, ಮುಂದಿನ ಕಥಾನಕದ ಕಡೆಗೆ ತೆರಳುವದು ಉಚಿತವಲ್ಲವೆ?



# ಆಳರಸರ ದಬ್ಬಾಳಿಕೆ.



ಜಡಸ್ವಾರ್ಥಿಗಳಿಗೆ ಸ್ವಾರ್ಥದ ಮುಂದೆ ಯಾವ ಧರ್ಮಗಳೂ ಹೆಚ್ಚಿ ನವಾಗಿ ತೋರುವದಿಲ್ಲ. ಯಾವ ಬಗೆಯಿಂದಲಾದರೂ ತಮ್ಮ ಹಿತವ ಷ್ಟು ಸಾಧಿಸಿತೆಂದರೆ ಕೃತಕೃತ್ಯರಾದೆವೆಂದು ಅವರು ತಿಳಿಯುತ್ತಾರೆ. ತಮ್ಮ ಸುಖ-ಸೌಕರ್ಯಗಳನ್ನು ಸಾಧಿಸುವಾಗ ಎರಡನೆಯವರಿಗೆ ಎಷ್ಟು ಬಗೆಯಿಂದ ಕಷ್ಟ-ನಷ್ಟಗಳೊದಗಿದರೂ ಅದರ ಪರಿವೆಯು ಅವರಿಗಿರುವದಿಲ್ಲ ಸ್ವಾರ್ಥವು ಅವರ ಮನಸ್ಸನ್ನು ಅಷ್ಟು ಕಲ್ಲು ಮಾಡುತ್ತದೆ; ನ್ಯಾಯ-ನೀತಿಗಳನ್ನು ಲುಪ್ತಪ್ರಾಯವಾಗಿ ಮಾಡು ತ್ತದೆ; ಸ್ವಹಿತಕ್ಕಾಗಿ ಬೇಕಾದಂತಹ ಕಾರ್ಯಗಳನ್ನು ಮಾಡುತ್ತ ಅವುಗಳನ್ನು ಪರಹಿತಕ್ಕಾಗಿ ಮಾಡುತ್ತೇವೆಂದು ಹೇಳುವಂತಹ ನಿರ್ಲ ಜ್ಜತನಕ್ಕೀಡು ಮಾಡುತ್ತದೆ; ನಾನಾ ಬಗೆಯ ಭೇದೋಪಾಯಗ ಳಿಂದಲೂ, ಕಪಟ ತಂತ್ರಗಳಿಂದಲೂ, ಗೃಹಕಲಹ, ಮಾತ್ಸರ್ಯ ಮೊದಲಾದ ದುರ್ಗುಣಗಳಿಗೆ ಉತ್ತೇಜನ ಕೊಡುತ್ತದೆ; ಅನ್ಯರ ಸ್ವತ್ತನ್ನು ಅಪಹರಿಸಿ, ಅದರ ಮೇಲೆ ತಮ್ಮ ಸ್ವಾಮಿತ್ವವನ್ನು ಪ್ರಸ್ಥಾ ಪಿಸುವಂತಹ ಅನ್ಯಾಯದ ಕೃತಿಗಳನ್ನು ಮಾಡಹಚ್ಚುತ್ತದೆ.

ಸದ್ಯಕ್ಕೆ ಮಂಗಳೀಶನ ಸ್ಥಿತಿಯಾದರೂ ಇದೇ ಬಗೆಯದಾ ಗಿತ್ತು. ಅವನು ತಾನೇ ಸಾಮ್ರಾಜ್ಯದ ಒಡೆಯನಾಗಬೇಕೆಂದು ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ಪುಲಿಕೇಶಿಯು ರಾಜ್ಯವಾ ಳುವದಕ್ಕೆ ಅನರ್ಹನಿರುವದರಿಂದ, ಅವನ ವಶಕ್ಕೆ ಅದನ್ನು ಒಪ್ಪಿಸು ವದರಿಂದ ಸಾಮ್ರಾಜ್ಯಕ್ಕೆ ಹಾನಿತಟ್ಟುವದೆಂದು ಅವನು ಜನರಿಗೆ ಹೇಳತೊಡಗಿದ್ದನು. ಅವನ ವಿಷಯಕ್ಕೆ ಇಲ್ಲದ ವಿಪರೀತ ಕಲ್ಪನೆ ಗಳನ್ನು ಕಲ್ಪಿಸಿ, ಪ್ರಜಾಜನರಲ್ಲಿ ಅನಾದರಭಾವನೆಯು ಉತ್ಪನ್ನವಾ ಗುವಂತೆ ಬುದ್ಧಿಪೂರ್ವಕವಾಗಿ ಮಂಗಳೀಶನು ಯತ್ನಿಸತೊಡಗಿ ದ್ದನು. ಚಾಲುಕ್ಯ ಸಿಂಹಾಸನದ ಪ್ರಾಪ್ತಿಗಾಗಿ ಅವನು ಬರೀ ಸಾಮೋಪಾಯವನ್ನಷ್ಟು ಕೈಕೊಂಡಿರದೆ, ದಂಡೋಪಾಯಗಳನ್ನಾ

ದರೂ ಬಳಿಕೆಯಲ್ಲಿ ತರತೊಡಗಿದ್ದನು. ಪುಲಿಕೇಶಿಯು ಪಕ್ಷದ ಜನ ರನ್ನು ಚನ್ನಾಗಿ ಹಣ್ಣು ಮಾಡಬೇಕೆಂದು ಅವನು ನಿರ್ಧರಿಸಿಕೊಂಡಿದ್ದನು. ಪುಲಿಕೇಶಿಯು ಪಕ್ಷವನ್ನು ಯಾರು ವಹಿಸುವರೋ, ಅವರಿಗೆ ಉಗ್ರದಂಡನೆಯು ವಿಧಿಸಲ್ಪಡುವದೆಂದು ಅವನು ಡಂಗುರ ಹೊಡೆಯಿಸಿದ್ದನು.

ತನ್ನ ರಾಕ್ಷಸೀ ಆಕಾಂಕ್ಷೆಯನ್ನು ಪೂರ್ತಿಗೊಳಿಸುವದಕ್ಕಾಗಿ ನೀಚ ಹೃದಯುದವನೂ, ನಿಷ್ಠುರನೂ ಆದ ಮಂಗಳೇಶನು ಪುಲಿಕೇಶಿಯು ಪಕ್ಷದವರನ್ನನೇಕರನ್ನು ಶೂಲಕ್ಕೇರಿಸಿದ್ದನು. ಎಷ್ಟೋ ಜನರು ಭೀಷಣವಾದ ಯಾತನೆಗಳನ್ನನುಭವಿಸಿ ಮೃತಿಹೊಂದಿದ್ದರು. ಎಷ್ಟೋ ಜನರ ಸ್ವತ್ತುಗಳು ಅಪಹರಿಸಲ್ಪಟ್ಟಿದ್ದವು. ಹೀಗೆ ನಾನಾ ಬಗೆಯಿಂದ ಅತ್ಯಾಚಾರಗಳನ್ನು ನಡೆಯಿಸಿ ತಾನೇ ಸಾಮ್ರಾಜ್ಯದ ಚಿರವಾದ ಒಡೆಯನಾಗಬೇಕೆಂದು ಮಂಗಳೇಶನು ದೀರ್ಘಸಾಹಸವನ್ನು ನಡೆಯಿಸಿದ್ದನು.

ಸತ್ಯವರ್ಮ-ಪ್ರತಾಪವರ್ಮರನ್ನು ಪದಚ್ಯುತ ಮಾಡಬೇಕೆಂದು ಮಂಗಳೇಶನು ನಿಶ್ಚಯಿಸಿಕೊಂಡ ಮೇರೆಗೆ ಅವರವರ ಅಪರಾಧಗಳನ್ನು ಓಲಗದಲ್ಲಿ ಸಾರಿ ಹೇಳಿ, ಅವರ ಅಧಿಕಾರಗಳನ್ನು ತೆಗೆದುಕೊಳ್ಳಬೇಕೆಂದು ಓಲಗವನ್ನು ಕೂಡಿಸಿದ್ದನು. ಸತ್ಯವರ್ಮನ ಅಧಿಕಾರವು ಚಂದ್ರಸೇನನಿಗೆ ಹಾಗು ಪ್ರತಾಪವರ್ಮನ ಅಧಿಕಾರವು ನಯನಸೇನನಿಗೆ ದೊರೆಯತಕ್ಕದ್ದಾಗಿತ್ತು. ಆಗ ಮಂಗಳೇಶನು ಓಲಗವನ್ನುದ್ದೇಶಿಸಿ:—

"ನನ್ನ ಪ್ರೇಮದ ಪ್ರಜಾಜನರೇ, ನಿಮ್ಮೆಲ್ಲರ ಇಚ್ಛೆಯಂತೆ ನಾನು ಬೇಗನೆ ಸಿಂಹಾಸನವನ್ನು ಆರೋಹಿಸತಕ್ಕವನಿರುವೆನು. ಅನರ್ಹನೂ ಮೂರ್ಖನೂ ಆದ ಪುಲಿಕೇಶಿಯು ಕೈಯಲ್ಲಿ ನನ್ನ ಪ್ರೀತಿಯ ಪ್ರಜಾಜನರನ್ನು ಒಪ್ಪಿಸಲಾರೆನು. ನೀವು ಈ ಬಗ್ಗೆ ಯಾವ ಬಗೆಯ ಚಿಂತೆಯನ್ನೂ ಮಾಡಬೇಡಿರಿ. ಪುಲಿಕೇಶಿಯು ತಾನೇ ಸಾಮ್ರಾಜ್ಯಾಧಿಕಾರಿಯಾಗಬೇಕೆಂದು ಬಯಸತೊಡಗಿರುವನು. ಪ್ರಜಾಜನರ

ಮನಸ್ಸಿನ ವಿರುದ್ಧವಾಗಿ ನಡೆದು, ಅಧಿಕಾರಚ್ಯುತನಾಗಿರುವದರಿಂದ, ಅವನು ಈಗ ರಾಜನಲ್ಲವೆಂಬದು ಪ್ರತಿಯೊಬ್ಬ ನಿಸ್ಪೃಹವೃತ್ತಿಯ ಜನರಿಗೆ ಗೊತ್ತಾಗಿರುವದು. ಅವನು ಬಂಡಾಯವೆಬ್ಬಿಸಿ, ಆರಸು ತನವನ್ನು ಸಂಪಾದಿಸಬೇಕೆಂದು ಹವಣಿಸಿರುವನು. ಆ ಪುಂಡನ ಹಸ್ತಕರನೇಕರು ಇರುವರೆಂಬದು ಸರ್ವಶ್ರುತವಿದೆ ಅವನ ಪಕ್ಷದ ಜನರಿಗೆ ದೇಹಾಂತ ಶಾಸನವನ್ನು ವಿಧಿಸದಿದ್ದರೆ, ಸಾಮ್ರಾಜ್ಯದ ದ್ರೋಹ ಮಾಡಿದಂತಾಗುವದೆಂದು ಬಗೆದು, ಕೆಲ ಜನರನ್ನು ಶೂಲಕ್ಕೆ ಹಾಕಿಸಿರುವೆನು; ಕೆಲ ಜನರು ಕಾರಾಗೃಹದಲ್ಲಿರುವರು. ಸತ್ಯ ವರ್ಮ-ಪ್ರತಾಪವರ್ಮರು ಚಾಲುಕ್ಯಸಾಮ್ರಾಜ್ಯದ ಅನ್ನದಿಂದ ಪರಿ ಪೋಷಿಸಲ್ಪಡುತ್ತಿದ್ದರೂ ಅವರು ಬಂಡುಗಾರನ ಪಕ್ಷವನ್ನು ವಹಿಸಿ, ರಾಜಕ್ರಾಂತಿ ಮಾಡಲು ಉದ್ಯುಕ್ತರಾಗಿರುವರು. ಇವರಿಗಾದರೂ ಘೋರ ಶಾಸನವು ವಿಧಿಸಲ್ಪಡಬೇಕಾಗಿತ್ತು. ಮೊದಲಿನಿಂದ ಸಾಮ್ರಾ ಜ್ಯದ ಹಿತಕ್ಕಾಗಿ ಪ್ರಯತ್ನಿಸಿದವರಿದ್ದುದರಿಂದ, ಇವರಿಗೆ ಸೌಮ್ಯ ಶಾಸನ ವಿಧಿಸಬೇಕಾಗಿರುವದು. ಅವರ ಮನಸ್ಸು ಪಶ್ಚಾತ್ತಾಪ ಶುದ್ಧಿಯಾಯಿತೆಂದರೆ, ಅವರವರ ಅಧಿಕಾರವನ್ನು ಅವರಿಗೆ ಕೊಡುವ ದಕ್ಕೆ ನಾನು ಸಿದ್ಧನಿರುವೆನು. ಸದ್ಯಕ್ಕೆ ಸತ್ಯವರ್ಮ-ಪ್ರತಾಪ ವರ್ಮರ ಅಧಿಕಾರವು ಕಿತ್ತುಕೊಳ್ಳಲ್ಪಟ್ಟದೆ ಸತ್ಯವರ್ಮರ ಮಂತ್ರಿ ಪದದ ಮೇಲೆ ಚಂದ್ರಸೇನರನ್ನು ನಿಯಮಿಸಿರುವೆನು; ಪ್ರತಾಪ ವರ್ಮರ ಸೇನಾಧಿಪತ್ಯವು ನಯನಸೇನರಿಗೆ ಕೊಡಲ್ಪಟ್ಟದೆ" ಎಂದು ಮಂಗಳೇಶನು ನುಡಿದು, ಚಂದ್ರಸೇನ-ನಯನಸೇನರನ್ನು ಮುಂದೆ ಕರೆದು, ಮಂತ್ರಿಪದ-ಸೇನಾಪತ್ಯಗಳ ವಸ್ತ್ರಗಳನ್ನು ಕೊಟ್ಟನು.

ಮಂಗಳೇಶನ ಈ ಉದ್ಗಾರವನ್ನು ಕೇಳಿದೊಡನೆಯೇ ಸತ್ಯ ವರ್ಮ-ಪ್ರತಾಪವರ್ಮರಿಗೆ ಬ್ರಹ್ಮಾಂಡಕ್ಕೆ ಬೆಂಕಿ ಹತ್ತಿದಂತಾ ಯಿತು. ಸತ್ಯವರ್ಮನಂತೂ ಜಮದಗ್ನಿಯಂತೆ ಉಗ್ರನಾಗಿ ತೋರ ತೊಡಗಿದನು. ಆಗ ಅವನು ರೋಷಾವೇಶದಿಂದ:—

"ಮಂಗಳೇಶಾ! ಸಮ್ರಾಟ ಪುಲಿಕೇಶಿ ಮಹಾರಾಜರು ಬಂಡು

ಗಾರರೇ? ಸಾರ್ವಭೌಮ-ಕೀರ್ತಿವರ್ಮರ ಜ್ಯೇಷ್ಠಪುತ್ರರು-ಈ ಚಾಲುಕ್ಯಸಾಮ್ರಾಜ್ಯದ ನಿಜವಾದ ಬಾಧ್ಯಸ್ಥರು-ಚಾಲುಕ್ಯಪ್ರಜಾ ಜನವತ್ಸಲರು ಬಂಡುಗಾರರೇ? ರಾಜ್ಯದ ಸ್ವಾಮಿಯನ್ನು ಅಧಿಕಾರ ಹೀನನನ್ನಾಗಿಮಾಡಿ ಅವನ ಅಧಿಕಾರ ಸೂತ್ರಗಳನ್ನು ಕೈಯಲ್ಲಿ ತೆಗೆದು ಕೊಂಡು, ಅವನಿಗೆ ವನವಾಸವನ್ನು ಭೋಗಿಸ ಹಚ್ಚಿ. ಸ್ಥಿರವಾಗಿ ರಾಜ್ಯದ ಸ್ವಾಮಿಯಾಗಬೇಕೆಂಬ ಆಸುರೀ ಮಹತ್ವಾಕಾಂಕ್ಷೆಯುಳ್ಳ ಬಂಡುಗಾರನಾದ ನೀನು, ನನ್ನ ಸ್ವಾಮಿಗೆ-ನನ್ನ ಚಾಲುಕ್ಯಸಾಮ್ರಾ ಜ್ಯದ ಸ್ವಾಮಿಗೆ, ನನ್ನ ಕರ್ನಾಟಕ ಭೂಮಾತೆಯ ವೀರಾಗ್ರಣಿ ಯಾದ ಸುಪುತ್ರನಿಗೆ ಬಂಡುಗಾರನೆನ್ನುವಿಯಾ? ಚಾಲುಕ್ಯಸಾಮ್ರಾ ಜ್ಯದಲ್ಲಿ ಒಡಕನ್ನುಂಟು ಮಾಡಿ, ಚಾಲುಕ್ಯ ಸಮ್ರಾಟನ ವಿಷಯಕ್ಕೆ ಅನಾಸ್ಥೆಯ ವಿಷಬೀಜಗಳನ್ನು ಬಿತ್ತಿ, ರಾಜಭೋಗಗಳನು ಸಂಪಾದಿ ಸಬೇಕೆನ್ನುವ ಬಂಡುಗಾರನಾದ ನೀನು, ಸಮ್ರಾಟ ಪುಲಿಕೇಶಿ ಮಹಾ ರಾಜರಿಗೆ ಬಂಡುಗಾರನೆನ್ನುವಿಯಾ? ಸಾಮ್ರಾಜ್ಯದ ಪ್ರಜೆಗಳು ಮರುಳರೂ ಕರ್ತವ್ಯತಾರತಮ್ಯಹೀನರೂ ರಾಷ್ಟ್ರಧರ್ಮಶೂನ್ಯರೂ ಇರುವದರಿಂದ, ನಿನ್ನ ಈ ಅಟ್ಟಹಾಸವು ಆತಂಕವಿಲ್ಲದೆ ನಡೆದಿರು ವದು ಅಂತೆಯೇ ಸ್ವಾಮಿನಿಷ್ಠರು ರಾಜದ್ರೋಹಿಗಳೂ ಸಾಮ್ರಾಜ್ಯ ದ್ರೋಹಿಗಳೂ ಎಂದು ಶಿಕ್ಷಿಸಲ್ಪಟ್ಟರು! ಮಂಗಳೇಶಾ! ನೀನು ರಾಜ ನೆಂದು ಭ್ರಮೆಯಿದ್ದರೆ, ನಾವು ರಾಜದ್ರೋಹಿಗಳು ನಿಜವು; ನಿನ್ನದು ಎಲ್ಲಿಯಾದರೂ ದೇಶವಿದ್ದರೆ ನಾವು ಆ ದೇಶದ್ರೋಹಿಗಳು ನಿಜವು. ಚಾಲುಕ್ಯಸಮ್ರಾಟನ ಹಾಗು ಕರ್ನಾಟಕ ದೇಶದ ದ್ರೋಹಮಾಡು ವವನ ದ್ರೋಹಚಿಂತನೆ ಮಾಡುವದಕ್ಕೆ ನಾವು ಆಮರಣ ಸಿದ್ಧರಿರು ವೆವು. ಈ ಕರ್ನಾಟಕ ಸಾಮ್ರಾಜ್ಯದ ಹಾಗು ಸಾಮ್ರಾಜ್ಯದ ನಿಜವಾದ ಸಮ್ರಾಟನ ಅದ್ವಿತೀಯ ಸ್ವಾಮಿನಿಷ್ಠರಾದ ನಮಗೆ ಅನ್ಯಾ ಯದಿಂದ ಮಾತನಾಡಿದ್ದಕ್ಕೆ ನಿನಗೆ ಯೋಗ್ಯ ಶಾಸನವು ದೊರೆಯ ದಿರದು. ಕೈಯಲ್ಲಿ ಅಧಿಕಾರವಿರುವದೆಂಬ ಹೆಮ್ಮೆಯಿಂದ ಮನ ಬಂದಂತೆ ಆಚರಿಸುವದು ದೇವತಾಸೃಷ್ಟಿಯಲ್ಲಿ ಅತಿರೇಕವಾದ ಅನ್ಯಾ

ಯುವೇ ಸರಿ. ಅಸತ್ಯಪಕ್ಷವಾದ ನಿನಗೀಗ ಸೌಖ್ಯವೆನಿಸತೊಡಗಿದ್ದರೂ ಕಡೆಗೆ ಸತ್ಯಕ್ಕೆ ವಿಜಯುವಾಗಿ ನಿಮ್ಮಂತಹ ರಾಜದ್ರೋಹಿಗಳಿಗೆ, ದೇಶದ್ರೋಹಿಗಳಿಗೆ, ಬಂಡುಗಾರರಿಗೆ ಯೋಗ್ಯ ಶಾಸನವು ದೊರೆತೇ ದೊರೆಯುವದೆಂದು ಸೆರಗಿಗೆ ಗಂಟು ಹಾಕಿಕೊ!''

''ಹೆಚ್ಚು ಮಾತನಾಡಿದರೆ ಕಾರಾಗೃಹದ ಸಂಗಡಿಗನಾಗಬೇಕಾಗುವದೆಂಬದನ್ನು ಮರೆಯಬೇಡ. ಸತ್ಯವರ್ಮಾ, ಈಗ ಎಲ್ಲಿರುವೆಯೆಂಬದರ ಪರಿವೆಯಿದೆಯೋ? ನೀನು ವಯೋವೃದ್ಧನಿರುವದರಿಂದಲೂ, ಸಾಮ್ರಾಜ್ಯದ ಸೇವೆಯನ್ನು ಬಹುಕಾಲ ಮಾಡಿರುವದರಿಂದಲೂ ನಿನಗೆ ಜೀವದಾನ ಕೊಡಬೇಕಾಗಿದೆ!''

''ಮಂಗಳೇಶಾ! ನಿನ್ನ ಕಾರಾಗೃಹದ ಬೆದರಿಕೆಯಾಗಲಿ ನಿನ್ನ ಶೂಲದ ಅಂಜಿಕೆಯಾಗಲಿ ನಮಗಿಲ್ಲ. ಸತ್ಪಕ್ಷವನ್ನು ಹಿಡಿದು ಸಾಹಸ ಮಾಡುವಾಗ ಮರಣ ಬಂದರೆ, ಅದೊಂದು ಭಾಗ್ಯವೆಂದು ರಾಷ್ಟ್ರಭಕ್ತರಾದ ನಾವು ತಿಳಿದುಕೊಳ್ಳುವೆವು. ಅಳರಸರಾದ ಚಂದ್ರಸೇನ-ಶಿವವರ್ಮರಂತಹ ಸ್ವಾರ್ಥಿಗಳು ಬಂಡುಗಾರರ ಮುಖಂಡನಾದ ನಿನ್ನ ಹಸ್ತಕರಾಗಿರುವದರಿಂದ ಈ ಬಗೆಯಾಗಿ ಪ್ರಸ್ಥ ಬೆಳೆಯಿಸಿರುವೆ ಮಂಗಳೇಶಾ! ಸಾಮ್ರಾಜ್ಯದ ಒಡೆಯನ ಮೇಲೆ ತಿರುಗಿ ಬೀಳುವದಕ್ಕೆ ನಿನಗೆ ಹೇಸಿಕೆಯೆನಿಸುವದಿಲ್ಲವೆ? ಚಾಲುಕ್ಯ ಸಾಮ್ರಾಜ್ಯದಲ್ಲಿ ನಿಷ್ಠೆಯುಳ್ಳವರಾದ ಈ ರಾಷ್ಟ್ರ ಭಕ್ತರಿಗೆ ರಾಜದ್ರೋಹಿಗಳೆನ್ನುವದಕ್ಕೆ ನಾಚಿಕೆಯಾಗುವದಿಲ್ಲವೆ? ಧಿಃಕಾರ! ಧಿಃಕಾರ! ನಿನ್ನ ಅಸುರೀ ಮನೋವೃತ್ತಿಗೆ ಶತಶಃ ಧಿಃಕಾರ!''

ಎಂದು ಪ್ರತಾಪವರ್ಮನು ಆವೇಶಯುಕ್ತವಾದ ಉದ್ಗಾರ ತೆಗೆದ ಕೂಡಲೆ ಮಂಗಳೇಶನ ಸಂತಾಪವು ಮಸ್ತಕಕ್ಕೇರಿತು. ನೆರೆದ ಸಭೆಯಲ್ಲಿ ಭಾವೀ ಸಮ್ರಾಟನಾದ ತನ್ನ ಮಾನಖಂಡನೆ ಮಾಡಿದನೆಂದು ಅವನು ರೇಗಿಗೆದ್ದನು ''ಪ್ರತಾಪಾ! ನೀನು ನಿನ್ನ ಕ್ಷೇತ್ರವನ್ನು ಮೀರಿ ಮಾತಾಡಿದೆ! ಈ ಅಪರಾಧಕ್ಕಾಗಿ ದೇಹಾಂತಶಾಸನವನ್ನು ವಿಧಿಸಬೇಕಾಗಿತ್ತು. ಇಷ್ಟು ದಿನಗಳ ವರೆಗೆ ರಾಜ್ಯರಕ್ಷಣೆ

ಯಲ್ಲಿ ಅನೇಕ ಬಾರಂ ಕೂಂತನವನ್ನು ಪ್ರಕಟಿಸಿರುವದರಿಂದ, ನಿನ್ನನ್ನು ಅಲ್ಪಮಟ್ಟಿಗೆ ಕ್ಷಮಿಸಬೇಕಾಗಿದೆ. ಇನ್ನು ಮೂರು ದಿವಸಗಳೊಳಗಾಗಿ ನನ್ನ ರಾಜ್ಯದೊಳಗಿಂದ ಹೊರಟು ಹೋಗು! ಇಲ್ಲದಿದ್ದರೆ ಶೂಲಶಿಕ್ಷೆಯು ವಿಧಿಸಲ್ಪಡುವದು!''

"ನಿನಗೆ ರಾಜ್ಯವೆಲ್ಲಿ? ನೀನು ಎತ್ತಣ ರಾಜನು? ಅನ್ಯಾಯದಿಂದ ಅನ್ಯಾಕ್ರಾಂತಗೈಯುವವರ ಮುಸುಡಿಯ ಮೇಲೆ ನಾನು 'ಥೂ' ಎಂದು ಉಗುಳುತ್ತೇನೆ! ನಿನ್ನಂತಹ ಹೀನನ ಸೇವಾವೃತ್ತಿಯನ್ನು ನನ್ನ ಮನೆಯ ಶ್ವಾನವು ಸಹ ಮಾಡಲಿಕ್ಕೆ ಒಪ್ಪುವದಿಲ್ಲ! ಇಗೋ ಹೊರಟೆನು. ರಾಜ್ಯವು ನಿಜವಾದ ರಾಜನ ಸ್ವಾಧೀನವಾಗುವ ವರೆಗೆ ಇಲ್ಲಿ ಈ ಸೂರ್ಯನನ್ನು ನೋಡಲಿಕ್ಕಿಲ್ಲ.'' ಎಂದು ನುಡಿದು, ಪ್ರತಾಪವರ್ಮನು ಓಲಗದಿಂದ ಹೊರಬಿದ್ದನು.

"ಮಂಗಳೇಶಾ, ನಿನ್ನ ಆಯುಷ್ಯ ಸಂಪೂರ್ತಿಯು ಸಮೀಪಿಸಿದ್ದರಿಂದ ಈ ಬಗೆಯಾಗಿ ಉನ್ಮತ್ತನಾದೆಯಲ್ಲವೆ? ಮೂರ್ಖಾ! ರಾಜದ್ರೋಹಿಯೇ! ಸಾಮ್ರಾಜ್ಯಘಾತಕಿಯೇ ಸ್ವಾರ್ಥವೃತ್ತಿಯುವನಾದ ನಿನಗ ಧಿಃಕಾರ-ಧಿಃಕಾರ!''ಎಂದು ನುಡಿದು ಸತ್ಯವರ್ಮನೂ ಅಲ್ಲಿಂದ ರಭಸದೊಳಿದ್ದು ಮನೆಗೆ ತೆರಳಿದನು

ಮಂಗಳೇಶನು ಎಷ್ಟೇ ನಿಷ್ಠುರನಿದ್ದರೂ, ಅವನ ಮನಸ್ಸು ಎಷ್ಟೇ ನೀಚವಾಗಿದ್ದರೂ ಸತ್ಯವರ್ಮ-ಪ್ರತಾಪವರ್ಮರ ವರ್ಚಸ್ಸಿನ ಮುಂದೆ ಯಾವ ಆಟವೂ ನಡೆಯದ್ದರಿಂದ, ಅವರ ಕಟುಭಾಷಣಗಳನ್ನು ಸಹಿಸಬೇಕಾಗಿತ್ತು. ಅವರು ಹೊಂಟು ಹೋದ ಮೇಲೆ ತನ್ನ ಮರ್ಯಾದೆಯನ್ನು ತುಂಬಿಕೊಳ್ಳುವದಕ್ಕಾಗಿ ಮಂಗಳೇಶನು:

"ಕೀಳುಮನೋವೃತ್ತಿಯುವರಾದ ಮಂತ್ರಿ-ಸೇನಾಪತಿಗಳಿಗೆ ತಕ್ಕ ಶಾಸನವನ್ನು ವಿಧಿಸಿದೆನು. ಅವರು ಪದಾರೂಢವಿರುವವರೆಗೆ ಸಿಂಹಾಸನಾರೋಹಣಕ್ಕೆ ಆತಂಕವಿತ್ತು. ಇನ್ನು ಮೇಲೆ ಒಂದು ಸುಮುಹೂರ್ತದಲ್ಲಿ ಪಟ್ಟಾಭಿಷೇಕ ಮಾಡಿಸಿಕೊಳ್ಳುವೆನು. ಪದಚ್ಯುತರಾದ ದುಃಖದಲ್ಲಿ ಅವರಿಂದ ಎಷ್ಟೇ ಕೆಟ್ಟ ಮಾತುಗಳಾಡಲ್ಪಟ್ಟ

ದ್ದರೂ ದೊಡ್ಡ ಮನಸ್ಸಿನಿಂದ ಕ್ಷಮಿಸಿರುವೆನು."

"ಮಹಾರಾಜರೇ, ಪ್ರತಾಪವರ್ಮನಿಗೆ ತಕ್ಕ ಶಾಸನವು ವಿಧಿಸಲ್ಪಟ್ಟಿತು. ಸತ್ಯವರ್ಮನಿಗಾದರೂ ಗಡಿಪಾರಿನ ಶಿಕ್ಷೆಯು ವಿಧಿಸಲ್ಪಟ್ಟಿದ್ದರೆ ಲೇಸಾಗುತ್ತಿತ್ತು. ಪುಲಿಕೇಶಿಯ ಮುಖ್ಯ ಹಸ್ತಕರು ನಿರ್ನಾಮವಾಗುವದು ನಮ್ಮ ಕಾರ್ಯಕ್ಕೆ ಶ್ರೇಯಸ್ಕರವಿರುವದು." ಎಂದು ಶಿವವರ್ಮನು ನುಡಿದೊಡನೆಯೇ ಚಂದ್ರಸೇನನು ಬುದ್ಧಿಪೂರ್ವಕವಾಗಿ:—

"ಪದಚ್ಯುತನಾದ ಅವನು ದಂತನಖಹೀನ ಸಿಂಹನಂತಾದ ಮೇಲೆ ಭಯಪಡುವದೇಕೆ? ಮಹಾರಾಜರೇ, ಇನ್ನು ಸಿಂಹಾಸನಾರೋಹಣ ಸಮಾರಂಭಕ್ಕೆ ವಿಲಂಬ ಮಾಡಬಾರದು. ಬೇಗನೆ ಸಮಾರಂಭವು ಜರುಗಬೇಕೆಂದು ಪ್ರಜಾಜನರು ಉತ್ಕಂಠಿತರಾಗಿರುವರು."

"ಪುಲಿಕೇಶಿಯಿಂದ ಪ್ರಸಂಗ ವಿಶೇಷದಲ್ಲಿ ನಮ್ಮ ಸಮಾರಂಭಕ್ಕೆ ತೊಂದರೆಯಾಗಬಹುದಾದ್ದರಿಂದ, ಅವನನ್ನು ಕಾರಾಗೃಹದಲ್ಲಿರಿಸಿ, ಮುಂದಿನ ಕಾರ್ಯವನ್ನು ಮಾಡುವದು ಹಿತಲ್ಲವೆ?"

"ಹಿಳ್ಳೆಯ ಯುಕ್ತಿಯು!" ಶಿವವರ್ಮನು ಗಹಗಹಿಸಿ ನಗುತ್ತ ನುಡಿದನು.

"ಸಮಯೋಚಿತ ಪ್ರಸಂಗಾವಧಾನವು!" ಎಂದು ಚಂದ್ರಸೇನನು ವಿಕಟಹಾಸ್ಯಗೈಯುತ್ತ ಮಾತನಾಡಿದನು!

---

## ಸಂಶಯ ಪಿಶಾಚಿ.

ವಿಜಯಾದಶಮಿಯ ಸುಮುಹೂರ್ತದಲ್ಲಿ ಮಂಗಳೇಶನು ಸಿಂಹಾಸನಾರೋಹಣ ಸಮಾರಂಭವನ್ನು ಜರುಗಿಸಬೇಕೆಂದು ನಿಶ್ಚಯಿಸಿಕೊಂಡಿದ್ದನು. ವಿಜಯಾದಶಮಿಯು ಎಂಟೇ ದಿನಗಳುಳಿದದ್ದರಿಂದ ವಾತಾಪಿಪುರ ರಾಜಧಾನಿಯನ್ನು ಶೃಂಗರಿಸುವ ಕಾರ್ಯವು ಹಿಳ್ಳೆಯ ರಭಸದಿಂದ ನಡೆದಿತ್ತು. ಎಲ್ಲ ಕಡೆಯಲ್ಲಿ ಆಮಂತ್ರಣ ಪತ್ರಿಕೆಗಳು ಹೋಗಿ

ದ್ದವು. ಆಮಂತ್ರಿತ ರಾಜರ ಹಾಗು ಸದ್ಗೃಹಸ್ಥರ ಸ್ವಾಗತದ ಪೂರ್ವ ಸಿದ್ಧತೆಯಾದರೂ ಹಿರಿತಾಗಿ ನಡೆದಿತ್ತು. ಪುಲಿಕೇಶಿಯು ಪರಿವಾರ ದವರಿಂದ ಸಮಾರಂಭಕ್ಕೆ ತೊಂದರೆಯೊದಗಬಾರದೆಂದು ರಾಜಧಾನಿಯು ತುಂಬ ಸಶಸ್ತ್ರ ಸೈನಿಕರ ಕಾವಲು ಕುಳ್ಳಿರಿಸಲ್ಪಟ್ಟಿತ್ತು.

ಪದಚ್ಯುತ ಸಮ್ರಾಟನಾದ ಪುಲಿಕೇಶಿಯು ತನ್ನ ಅರಮನೆಯಲ್ಲಿ ವಿಷಣ್ಣಮನಸ್ಕನಾಗಿ ಕುಳಿತುಕೊಂಡಿದ್ದನು. ಎದುರಿನಲ್ಲಿಯೇ ಅವನ ಪತ್ನಿಯಾದ ವಿಜಯಾಂಬಿಕೆಯು ಮ್ಲಾನವದನೆಯಾಗಿ ಕುಳಿತಿದ್ದಳು. ಮಂಗಳೇಶನು ಈ ಬಗೆಯಾಗಿ ನೀಚತನದ ಅತಿರೇಕಕ್ಕೆ ಮನಸ್ಸು ಮಾಡಬಹುದೆಂದು ಆ ದಂಪತಿಗಳಿಗೆ ಮೊದಲು ತಿಳಿದಿರಲಿಲ್ಲ. ಸಾಮ್ರಾಜ್ಯದ ಮುತ್ಸದ್ದಿಗಳಾದರೂ ಅವನ ಬಾಹ್ಯಾಡಂಬರಗಳಿಗೆ ಮರುಳಾಗಿ ಯಾವಬಗೆಯ ಜಾಗ್ರತೆಯನ್ನೂ ಹೊಂದಿರಲಿಲ್ಲ. ಕ್ರಮೇಣ ಪುಲಿಕೇಶಿಯು ಪರಿವಾರವೆಲ್ಲವು ಅಧಿಕಾರ ಚ್ಯುತವಾಗಿ ಯಾವ ಕಾರ್ಯವನ್ನೂ ಮಾಡುವದಕ್ಕೆ ಬಾರದಷ್ಟು ಬಲಹೀನಸ್ಥಿತಿಗೆ ಬಂದಿತ್ತು. ಕೆಲವು ಕೆಚ್ಚೆದೆಯ ಸ್ವಾಮಿನಿಷ್ಠರು ಅವನ ಸ್ವಾರ್ಥಬುದ್ಧಿಯನ್ನು ನಿಷೇಧಿಸಿ ಏನಾದರೂ ಚಲನವಲನವನ್ನೆಬ್ಬಿಸಿದರೆ, ಕಾರಾಗೃಹವಾಸವನ್ನು ಭೋಗಿಸಬೇಕಾಗುತ್ತಿತ್ತು; ಇಲ್ಲವೆ ದೇ-ಹಾಂತ ಪ್ರಾಯಶ್ಚಿತ್ತವನ್ನಾದರೂ ಹೊಂದಬೇಕಾಗಿತ್ತು. ಅವನ ಕ್ರೂರದಂಡನೆಗೆ ಅಂಜಿ, ಎಷ್ಟೋ ನಿಸ್ಪೃಹವೃತ್ತಿಯ ಜನರು ತಟಸ್ಥರಾಗಿ ಕುಳಿತುಬಿಟ್ಟಿದ್ದರು. ಸತ್ಪಕ್ಷಪಾತಿಯಾದ ಪರಮಾತ್ಮನು ಸತ್ಯಕ್ಕೆ ವಿಜಯವೀಯದೆ ಇರಲಾರನೆಂಬ ಸಿದ್ಧಾಂತವಾಣಿಯನ್ನು ಹೇಳುತ್ತ, ಪುಲಿಕೇಶಿಯಾದರೂ ಯಾವ ಬಗೆಯ ದೀರ್ಘಸಾಹಸದ ಗೋಜಿಗೂ ಹೋಗದೆ, ಸ್ವಸ್ಥವಾಗಿ ಕುಳಿತು ಬಿಟ್ಟಿದ್ದನು. ಬಹಿರಂಗದಲ್ಲಿ ಅವನು ಹೀಗೆ ತಟಸ್ಥನಾಗಿ ಕುಳಿತಿದ್ದರೂ, ಅವನ ಅಂತರಂಗವು ಯಾವದೋ ಒಂದು ದೀರ್ಘ ಸಾಹಸವನ್ನು ನಡೆಯಿಸಿದಂತೆ ಅವನ ಮುಖಭಾವದಿಂದ ಕಂಡು ಬರುತ್ತಿತ್ತು.

ಅವರೀರ್ವರು ಎಷ್ಟೋ ಹೊತ್ತಿನ ವರೆಗೆ ಮೌನವ್ರತವನ್ನು

ಧಾರಣ ಮಾಡಿದ್ದರು. ಕೆಲವು ಹೊತ್ತಿನ ಮೇಲೆ ವಿಜಯಾಂಬಿಕೆಯು ನಿಟ್ಟುಸಿರು ಬಿಟ್ಟು, ಪತಿಯು ವಿಷಣ್ಣವದನವನ್ನು ನಿರೀಕ್ಷಿಸುತ್ತ ಕಣ್ಣುತುಂಬಾ ನೀರು ತಂದವಳಾಗಿ:—

"ನಾಥರೇ, ನಮ್ಮ ಪಾಲಿಗೆ ವನವಾಸವು ಬಂದಂತಾಯಿತು. ಯಾವ ಪ್ರಜಾಜನರಲ್ಲಿ ರಾಜನಿಷ್ಠೆಯು ಲವಲೇಶವಿಲ್ಲವೋ, ಯಾರಲ್ಲಿ ರಾಷ್ಟ್ರಧರ್ಮವು ಸದೈವ ಜಾಗ್ರತವಿರುವದಿಲ್ಲವೋ, ಯಾರಲ್ಲಿ ಸತ್ಯಾಸತ್ಯಗಳ ವಿಚಾರವಿಲ್ಲವೋ, ಯಾವ ಪ್ರಜೆಗಳು ನಿರಂತರ ವಿವೇಕ ಹೀನಸ್ಥಿತಿಯಲ್ಲಿರುವರೋ ಅಂತಹ ರಾಜ್ಯದಲ್ಲಿ ಒಂದು ನಿಮಿಷವಾದರೂ ಇರಕೂಡದು."

"ಪ್ರಿಯೆ, ಭಗ್ನಮನೋರಥಳಾಗಬೇಡ. ಜಗದೀಶನು ಇನ್ನೂ ಕಣ್ಣು ಮುಚ್ಚಿರುವದಿಲ್ಲ ಸತ್ಯಕ್ಕೆ ವಿಜಯವೀಯಲು ಆತನು ಸದಾ ಸರ್ವದಾ ಅನಂತಹಸ್ತಗಳನ್ನೆತ್ತಿಕೊಂಡು ನಿಂತಿರುವನು."

"ಆಶೆಯೆ? ಇನ್ನೂ ನಮಗೆ ಸಿಂಹಾಸನದ ಆಶೆಯೆ? ಪ್ರಾಣನಾಥಾ, ಒಡಹುಟ್ಟಿದ ಬಂಧುವಿನಂತಿದ್ದವನು ಸಹ ಸಂಪೂರ್ಣವಾಗಿ ಒಡೆದು ಹೋದ ಮೇಲೆ, ನಮಗಿನ್ನು ರಾಜ್ಯದಾಶೆಯೇಕೆ? ತಂದೆಯನ್ನು ಕೊಂದ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ಗುಪ್ತರೀತಿಯಿಂದ ಓಲಗದಲ್ಲಿ ದಾಸ್ಯವನ್ನು ಕೈಕೊಂಡವನು ಇಂದು ಮಂತ್ರಿಪದದ ಐಶ್ವರ್ಯದಲ್ಲಿ ಅಂಧನಾಗಿ, ಸ್ವಕರ್ತವ್ಯ ವಿಸ್ಮೃತಿಯನ್ನು ಹೊಂದಿದ ಮೇಲೆ, ನನಗಂತೂ ಶುಭೋದಯ ಕಾಲವೊದಗುವದೆಂಬಾಶೆಯು ತಿಲಾಂಶವೂ ಉಳಿದಿರುವದಿಲ್ಲ."

"ಪ್ರಿಯೇ, ಏನು? ನೀನು ಏನು ಮಾತನಾಡುವೆ? ನಿನ್ನ ಮಾತಿನ ಅರ್ಥವು ನನಗಾಗಲೊಲ್ಲದು; ವಿಶದವಾಗಿ ಹೇಳು."

"ಮಹಾರಾಜರೆ, ಮಂಗಳೇಶಮಾವಂದಿರ ಅಂಗರಕ್ಷಣೆಗಾಗಿ ನಿಂತುಕೊಂಡು, ಇಂದು ಮಂತ್ರಿಪದವನ್ನಾರೋಹಿಸಿ ಮದಾಂಧನಾದವನು ನನ್ನ ಮಾನಸಬಂಧುವಾದ ವೀರಸೇನನು; ಸ್ವಾಮಿರಾಜತನಯನು. ಹಿಂದಕ್ಕೆ ರೇವತೀ ದ್ವೀಪದಲ್ಲಿ ನಿಮ್ಮಿಂದ ಉಪಚರಿಸ

ಲ್ಪಟ್ಟವನು ಅವನೇ! ಚಂದ್ರಸೇನನೆಂಬ ಹೆಸರಿನಿಂದ ಮಂಗಳೇಶನ ಸೇಡು ತೀರಿಸಿಕೊಳ್ಳುವದಕ್ಕಾಗಿ ಇಲ್ಲಿಗೆ ಬಂದಿರುವನು. ಅವನ ಬಂಧುವಾದ ವಿಮಲಸೇನನು ನಯನಸೇನನೆಂಬ ಹೆಸರಿನಿಂದ ಕರೆಯಲ್ಪಡುವನು. ಈಗ ಅವನಿಗೆ ಪ್ರತಾಪವರ್ಮರ ಸೇನಾಧಿಪತ್ಯವು ಕೊಡಲ್ಪಟ್ಟದೆ. ತಮ್ಮಿರ್ವರ ಹೋಳಿಗೆಯು ತುಪ್ಪದಲ್ಲಿ ಬಿದ್ದಿತೆಂಬದರ ಉಬ್ಬಿನಲ್ಲಿ ಅವರು ನನ್ನನ್ನು ಪೂರಾ ವಂಚಿಸಿದರು. ಸಾಕ್ಷಾತ್ ಜನ್ಮದಾತನನ್ನು ಕೊಂದವನ ಮೇಲಿನ ಸಿಟ್ಟನ್ನು ಬಿಟ್ಟುಗೊಟ್ಟರು.''

''ನೀನು ಈ ಮಾತನ್ನು ಇದುವರೆಗೆ ನನ್ನೆದುರಿನಲ್ಲಿ ಹೇಳಲಿಲ್ಲವೇಕೆ?'' ''ನಾನು ವಚನಬದ್ಧಳಾದುದರಿಂದ ಈ ಸಂಗತಿಯನ್ನು ಗುಪ್ತವಿರಿಸಿದ್ದೆನು. ಅವನೇ ಸತ್ಯಪರಾಙ್ಮುಖನಾದ ಮೇಲೆ ಬಚ್ಚಿಟ್ಟು ಪ್ರಯೋಜನವೇನೆಂದು ಇಂದು ತಮ್ಮ ಸನ್ನಿಧಾನದಲ್ಲಿ ಉಸಿರಿದೆನು ಅಂದು ತಾವು ಚಂದ್ರಸೇನನಿಗೆ ದೋಷವಿಟ್ಟದ್ದಕ್ಕೆ ನಾನು ಸಿಟ್ಟಗೆದ್ದಾಗಲೇ ನಮ್ಮ ಗುಪ್ತಕಾರಸ್ಥಾನವು ಹೊರಬೀಳಬೇಕಾಗಿತ್ತು. ಹಿಂದು ಬಗೆಯಿಂದ ನಾನೇ ಸುಧಾರಿಸಿಕೊಂಡು ನಮ್ಮ ಗೂಢತಂತ್ರಗಳನ್ನು ಮುಚ್ಚಿಕೊಂಡೆನು. ಅವನು ಮೊದಲು ಯಾವಾಗಾದರೊಮ್ಮೆ ಭೆಟ್ಟಿಯಾಗುತ್ತಿದ್ದನು; ಇತ್ತಿತ್ತ ಭೆಟ್ಟಿಯಾಗುವದನ್ನು ಕೂಡ ಬಿಟ್ಟುಗೊಟ್ಟರುವೆನು.''

''ಪ್ರಿಯೆ, ತಂದೆಯನ್ನು ಕೊಂದದ್ಗರ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ಮುಂದುವರಿದವನು, ಹೀಗೆ ಪಿತೃದ್ರೋಹಿಯಾಗುವನೆಂಬ ಮಾತು ಅವಿಶ್ವಸನೀಯವಿರುವದು; ಅವನು ಆ ಸಂಧಿಯನ್ನು ಸಾಧಿಸುತ್ತಿರಬಹುದು ಎಂದಿನಂತೆ ಈ ಸಂಗತಿಯನ್ನು ಗುಪ್ತವಾಗಿರಿಸು. ಇನ್ನು ನಾನು ಸತ್ಯದ ಶೋಧನೆ ಮಾಡುವೆನು. ಪ್ರತಾಪವರ್ಮರು ಸೈನ್ಯವನ್ನು ಕೂಡಿಸುವದಕ್ಕಾಗಿ ಹೋಗಿರುವರು. ಅವರು ಸಾಕಷ್ಟು ಸೈನ್ಯವನ್ನು ಕೂಡಿಸಿದೊಡನೆಯೆ ಸಂಗ್ರಾಮಕ್ಕೆ ಅಣಿಯಾಗತಕ್ಕದ್ದಿದೆ. ಸತ್ಯವರ್ಮರಾದರೂ ಜನರನ್ನು ತಮ್ಮ ಪಕ್ಷಕ್ಕೆ

ಹಿಲಿಸಿಕೊಳ್ಳುವದಕ್ಕೆ ಅವಿಶ್ರಾಂತ ಶ್ರಮವನ್ನು ತೆಗೆದುಕೊಳ್ಳುತೊಡಗಿರುವರು. ಕಕ್ಕಂದಿರು ಸಿಂಹಾಸನಾರೋಹಣ ಮಾಡಿದರೂ ಅದು ಸ್ಥಿರವಾಗಿ ಅವರ ವಶದಲ್ಲಿಯೇ ಉಳಿಯುವದೆಂದು ನಂಬಬೇಡ."

"ಅಂತೂ ಕಾಳಗವಿಲ್ಲದೆ ಕಾರ್ಯಸಿದ್ಧಿಯಾಗದಂತಹ ಪರಿಸ್ಥಿತಿಗೆ ಬಂದಿರುವದೆಂದಾಯಿತು. ಕಾಳಗದಲ್ಲಿ ಇಂಥವರೇ ಜಯಶಾಲಿಗಳಾಗುತ್ತಾರೆಂಬದರ ನಿಯಮವೇನು? ಅಕಸ್ಮಾತ್ತಾಗಿ ನಿಮಗೆ ಸೋಲುಂಟಾದರೆ ಪೂರ್ಣವಾಗಿ ರಾಜ್ಯದಾಶೆಯನ್ನು ಬಿಡುವ ಪ್ರಸಂಗವೊದಗುವದಿಲ್ಲವೆ? ಮಂಗಳೇಶರ ಕೊಲೆ ಮಾಡಿ ತಂದೆಯ ಸೇಡನ್ನು ತೀರಿಸಿಕೊಳ್ಳಬೇಕೆಂದು ಅತುರಗೊಂಡವನು ಈ ಪರಿಯಾಗಿ ಅಟ್ಟಹಾಸ ಮಾಡುತ್ತ ಕುಳಿತುಕೊಳ್ಳುವದರಲ್ಲಿ ಏನೋ ಗೂಢವಿರಬೇಕೆಂದು ನನಗೆ ತಿಳಿಯುತ್ತದೆ. ಮಂತ್ರಿ-ಸೇನಾಧಿಪತ್ಯಗಳಿಗೆ ಮನಸೋತು ಮುಂಚಿನ ಆಪತ್ಕೃತಿಯನ್ನು ಚಂದ್ರಸೇನನು ಮರೆತಿರಬಹುದೇನು? ಹಾಗಾಗಿದ್ದರೆ ಮಂಗಳೇಶನ ಸೇನಾಸಾಗರದ ಮುಂದೆ ಕಾದುವ ಸಾಮರ್ಥ್ಯವು ದುರ್ಬಲವಾಗಿದ್ದ ನಿಮ್ಮ ಪರಿವಾರಕ್ಕೆ ಹೇಗೆ ಸಾಧ್ಯವಾದೀತು?"

"ಪ್ರಿಯೇ, ಇದಕ್ಕಾಗಿ ನೀನು ಚಿಂತಿಸಬೇಡ. ಪ್ರತಾಪವರ್ಮರು ಕಾಳಗದ ಸಿದ್ಧತೆಗಾಗಿಯೇ ರಾಜಧಾನಿಯನ್ನು ತ್ಯಜಿಸಿ ಹೋಗಿರುವರು. ಅವರಿಗೆ ಗಡಿಪಾರಿನ ಶಿಕ್ಷೆಯನ್ನು ವಿಧಿಸಿದ್ದು ಒಂದು ಬಗೆಯಿಂದ ಹಿತೇ ಆಯಿತು. ವಿಜಯಾದಶಮಿಯ ದಿನ ಸಿಂಹಾಸನಾರೋಹಣ ಸಮಾರಂಭವು ಜರುಗುವದೆಂದು ಅವರಿಗೆ ಗುಪ್ತಚಾರರ ಮುಖಾಂತರ ತಿಳಿಸಿದೆ. ಅಷ್ಟರಲ್ಲಿ ಸೈನ್ಯವನ್ನು ಸಿದ್ಧಪಡಿಸಿಕೊಂಡು ಬರುವ ಆಶೆಯಿರುವದು."

"ಅಂತೂ ನಮ್ಮ ಸಾಹಸದಿಂದಲೇ ನಮ್ಮ ಕಾರ್ಯವನ್ನು ಮಾಡಿಕೊಳ್ಳಬೇಕಾಯಿತು. ಅಣ್ಣನು ಈ ಕಾರ್ಯದಲ್ಲಿ ಹಿತವಾಗಿ ನೆರವಾಗುವನೆಂಬ ಆಶೆಯು ಬಲವಾಗಿತ್ತು. ಕಡೆಗೆ ಅವನು ಕರಳಿಗೆ ಕತ್ತರಿಯನ್ನು ತಂದನು. ಅಣ್ಣಾ, ವೀರಸೇನಾ! ನೀನು ಹೀಗೆ

ಭಗಿನೀ ದ್ರೋಹಚಿಂತನೆ ಮಾಡಬಹುದೆ?"

"ಆಗದು! ಹಾಗೆ ಕಾಲತ್ರಯದಲ್ಲಿಯೂ ಆಗದು! ಮೂಡಣದ ಸೂರ್ಯನು ಪಡುವಣ ದಿಸೆಯಲ್ಲುದಯಿಸಬಹುದು; ಆದರೆ ತಂಗೀ! ನಿನ್ನ ಅಣ್ಣನಾದ ಈ ವೀರಸೇನನ ಕಡೆಯಿಂದ ಭಗಿನೀ ದ್ರೋಹವು ಎಂದೂ ಘಟಿಸಲಾರದು! ಈ ಕೆಚ್ಚೆದೆಯ ಕರ್ನಾಟಕ ವೀರನು ತನ್ನ ಪ್ರತಿಜ್ಞೆಯನ್ನು ಕೊನೆಗಾಣಿಸದೆ ಎಂದಿಗೂ ಬಿಡನು!"

ಹೀಗೆ ಉದ್ಗಾರವು ಹೊರಟ ಕೂಡಲೆ ಆ ದಂಪತಿಗಳು ಮುಖವೆತ್ತಿ ನೋಡಿದರು. ಎದುರಿನಲ್ಲಿ ವಾತಾಪಿಪುರದ ನೂತನ ಮಂತ್ರಿಯಾದ ಚಂದ್ರಸೇನನು! ಚಂದ್ರಸೇನನು ಗಹಗಹಿಸಿ ನಗುತ್ತ ನಿಂತುಕೊಂಡಿದ್ದನು.

"ಅಣ್ಣಾ ವೀರಸೇನಾ!" ಎಂದು ವಿಜಯಾಂಬಿಕೆಯು ನುಡಿಯಲು, ಅವನು:—"ತಂಗೀ ಲಾವಣ್ಯವತೀ!"

ತನ್ನ ಮೊದಲಿನ ಹೆಸರಿನಿಂದ ಕರೆದುದರಿಂದ, ಅವಳಿಗೆ ತವರೂರಿನ ನೆನಪಾಯಿತು. ಕೌಮಾರ್ಯದಲ್ಲಿ ಅಣ್ಣ-ತಂಗಿಯರಾದ ತಾವು ಆಡಿದ ಆಟ-ಪಾಟಗಳ ನೆನಪಾಗಿ, ಅವರೀರ್ವರ ನೇತ್ರಗಳೂ ಆನಂದದುಃಖಮಿಶ್ರಿತವಾದ ಅಶ್ರುಗಳಿಂದ ತುಂಬಿದವು ವಿಜಯಾಂಬಿಕೆಯು ಮಾನಸ ಬಂಧುವಿನ ಮುಖವನ್ನೊಮ್ಮೆ ಸಪ್ರೇಮದೃಷ್ಟಿಯಿಂದ ನೋಡಿ:—

"ಅಣ್ಣಾ, ವೀರಸೇನಾ, ನಿನ್ನ ಭಗಿನಿಯನ್ನು ನೀನೀಗ ಪೂರ್ಣವಾಗಿ ಮರೆತೆಯಾ! ಮಂಗಳೇಶರು ಅಸೂಯಾಲಾಲಸೆಗೆ ಗುರಿಯಾಗಿರುವದರಿಂದ ಈ ದಂಪತಿಗಳಿಗೆ ವನವಾಸ ದುಃಖವನ್ನು ಭೋಗಿಸುವ ಪ್ರಸಂಗವು ಬಂದಿರುವದೆಂಬದರ ಪರಿವೆಯೂ ನಿನಗಿಲ್ಲದಾಯಿತೇ? ಮುನ್ನಿನ ವೈರವೆಲ್ಲ ಮಂತ್ರಿಪದದ ಸ್ವಾನಂದಸಾಮ್ರಾಜ್ಯದಲ್ಲಿ ಮರೆತು ಹೋಗಿ, ಕೊಲೆಗಡಕನ ವಿಷಯಕ್ಕೆ ನಿನ್ನ ಅಂತಃಕರಣವು ದಯಾಮಯವಾಯಿತೇ? ಏಳ, ಅಣ್ಣಾ, ಮಾತನಾಡು! ಸೌಖ್ಯಮಯ ಸ್ಥಿತಿಯಲ್ಲಿ ಸದೈವ ಲೋಲುಪನಾದ ನಿನಗೆ ನಿನ್ನ ಈ ಅಭಾ

ಗಿನಿ ಭಗಿನಿಯ ದುಃಖದ ಕಲ್ಪನೆಯು ಹೇಗಾಗಬೇಕು? ಸಾಮ್ರಾಜ್ಯ ಸೂತ್ರಗಳೆಲ್ಲವು ಕೈಯಲ್ಲಿ ಸಿಲುಕಿರುವಾಗ ಸತ್ಯಾಸತ್ಯಗಳ ವಿಚಾರ ಣೆಗೆ ನಿನ್ನ ಹೃದಯದಲ್ಲಿ ಸ್ಥಳವು ಹೇಗೆ ದೊರೆಯಬೇಕು? ಬಾಧ್ಯ ಸ್ಥನಾದ ಸಮ್ರಾಟನನ್ನು ಅಧಿಕಾರಚ್ಯುತಿಗೊಳಿಸಿ, ಸ್ವಾರ್ಥಿಯೂ ರಾಷ್ಟ್ರಹಿತವಿಘಾತಕಿಯೂ ಆದ ಒಬ್ಬ ನೀಚಮನೋವೃತ್ತಿಯ ಮನುಷ್ಯನನ್ನು ಸಿಂಹಾಸನಾರೂಢನನ್ನಾಗಮಾಡುವ ಸಮಾರಂಭ ದಲ್ಲಿ, ನಿನ್ನ ಸೇಡುತೀರಿಸಿಕೊಳ್ಳುವ ಹವಣಿಕೆಯು ನಾಶವಾಯಿತೆ? ಪಿತೃವಧೆಗೊಳಿಸಿದ್ದರ ಹೃದಯವ್ಯಥೆಯು ಇಲ್ಲದಾಯಿತೆ? ಹೇಳು, ಅಣ್ಣಾ, ನಿರ್ಮಲ ಮನಸ್ಸಿನಿಂದ ಹೇಳು. ನಿನ್ನ ಹೃದಯದ ನಿಜ ಸ್ಥಿತಿಯನ್ನು ನನ್ನ ಮುಂದೆ ಪ್ರಕಟಿಸು. ನೀನು ಲಾಂಗೂಲಚಾಲಕ ನಾಗಿ ಅಸತ್ಯಕ್ಕೆ ಪ್ರೋತ್ಸಾಹನೆ ಕೊಡುವ ಮನಸ್ಸುಳ್ಳವನಾಗಿದ್ದರೆ, ನಮ್ಮ ಹಾದಿಯನ್ನು ನಾವು ಕಂಡುಕೊಳ್ಳುತ್ತೇವೆ. ಬಾವಿಯಲ್ಲಿ ಬಿದ್ದಾಗ ಬಳ್ಳಿಯೆಂದು ಸರ್ಪದ ಆಶ್ರಯ ಮಾಡಿದಂತಹ ಆತ್ಮವಂಚ ಕತನದ ಕೃತಿಯು ಘಟಿಸಬಾರದೆಂದು ಜಾಗ್ರತೆಯಿಂದಿರುವದು ಹಿತಕರವು.''

ವಿಜಯಾಂಬಿಕೆಯು ಹೀಗೆ ಮಾತನಾಡಿದ ಕೂಡಲೆ ವೀರಸೇ ನನ ಹೃದಯಕ್ಕೆ ಬರೆಕೊಟ್ಟಂತಾಯಿತು ತಾನು ನಿರರ್ಥಕನಾಗಿ ಕಾಲಕ್ಷೇಪ ಮಾಡಿಗದಿದ್ದರೂ ತನ್ನ ಮಾನಸಭಗಿನಿಗೆ ದುಃಖವು ಪರ ಮಾವಧಿಯಾಗಿದೆಯೆಂದು ಅವನು ನೊಂದನು. ತನ್ನ ವಿಷಯಕ್ಕೆ ವಿಜಯಾಂಬಿಕೆಯಲ್ಲಿ ಸಂಶಯವುಂಟಾದದ್ದನ್ನು ನೋಡಿದ ಮೇಲಂತೂ ಅವನ ಹೃದಯವು ಬೆಂದು ಬೆಂಡಾಯಿತು! ಅವನು ತಂಗಿಯ ಮಾತುಗಳನ್ನು ಕೇಳುತ್ತ ಅವನತ ವದನನಾಗಿ ಕುಳಿತುಕೊಂಡಾಗ ಪುಲಿಕೇಶಿಯು ಅವನನ್ನು ಕುರಿತು:—

"ವೀರಸೇನಾ! ನೀನು ನನ್ನ ಕೈಸೆರೆ ಸಿಕ್ಕಾಗ ದೊಡ್ಡಿಸ್ತನದಿಂದ ಮುಕ್ತಮಾಡಿದ್ದನ್ನು ಪೂರ್ಣವಾಗಿ ಮರೆತಂತೆ ಕಂಡು ಬರುತ್ತದೆ. ನಿನ್ನ ತಂದೆಯನ್ನು ಕೊಂಡದ್ದರ ಬಗ್ಗ ನಿನ್ನಲ್ಲಿಯ ಸೇಡು ತೀರಿಸಿಕೊ

ಳ್ಳುವ ಭಾವನೆಯು ಪೂರ್ಣ ಲೋಪವಾದದ್ದನ್ನು ನೋಡಿ, ನೀನು ಪಿತೃದ್ರೋಹಿಯಿರುವೆಯೆಂದು ನನ್ನ ಮನಸ್ಸು ನನಗೆ ಹೇಳುತ್ತಲಿರು ವದು. ತನ್ನನ್ನು ಕೊಂದವನ ಅಭ್ಯುದಯುವನ್ನು ಚಿಂತಿಸುತ್ತಿರು ವದನ್ನು ನೋಡಿ, ಪರಲೋಕದಲ್ಲಿರುವ ಸ್ವಾಮಿರಾಜರು ಮಗನಾದ ನಿನ್ನನ್ನು ಎಷ್ಟು ಬಗೆಯಿಂದ ದೂಷಿಸುತ್ತಿರಬಹುದೆಂಬದರ ಕಲ್ಪ ನೆಯು ನಿನಗಿಲ್ಲವೆಂದು ಅನ್ನಬೇಕಾಗಿದೆ. ಮುಂದೆ ಒದಗಬೇಕಾಗಿ ರುವ ಧರ್ಮ ಸಂಗ್ರಾಮದಲ್ಲಿ ಸತ್ಯಕ್ಕೆ ವಿಜಯವು ದೊರೆಯದೆ, ಅಸತ್ಯಕ್ಕೆ ದೊರೆತರೆ, ಆ ದುಷ್ಕೀರ್ತಿಯು ಆಚಂದ್ರಾರ್ಕವಾಗಿ ನಿಮ್ಮಂತಹ ಕಾರ್ಯನಿರ್ವಾಹಕ ಜನರ ಪಾಲಿಗೇ ಕಟ್ಟಿಡುವದೆಂಬ ದನ್ನು ನೀನು ಮರೆಯಬೇಡ. ನಿಸ್ಪೃಹವೃತ್ತಿಯುವರು ಸತ್ಯಾಸತ್ಯ ಗಳ ವಿಚಾರವನ್ನು ಪೂರ್ಣವಾಗಿ ಮಾಡಿ ಕಾರ್ಯ ಮಾಡುತ್ತಿದ್ದರೆ, ಅವರು ಸುಕೀರ್ತಿಯುತರಾಗುವರು. ವೀರಸೇನಾ! ಅಧಿಕಾರ ಲಾಲ ಸೆಯಿಂದ ಒಬ್ಬ ಸ್ವಾರ್ಥಿಯ ಬೆಂಬಲವಾಗಿ ಸತ್ಯನಾಶ ಮಾಡಿ, ರಾಜ ದ್ರೋಹ-ರಾಷ್ಟ್ರದ್ರೋಹಗಳನ್ನು ಮಾಡಿದ್ದರ ಮಹಾಪಾತಕಕ್ಕೆ ಗುರಿಯಾಗಬೇಡವೆಂದು ನಿನಗೆ ಹೇಳದಿರಲಾರೆನು. ಯಾಕೆ, ವೀರ ಸೇನಾ! ನೀನು ವಿಜಯಾಂಬಿಕಾದೇವಿಗೆ ಆಶ್ವಾಸನವನ್ನಿತ್ತು, ಈಗ ಭಗಿನಿದ್ರೋಹ, ಪಿತೃದ್ರೋಹ, ರಾಜದ್ರೋಹ, ರಾಷ್ಟ್ರದ್ರೋಹ, ಸತ್ಯದ್ರೋಹ ಮೊದಲಾದ ಪಂಚಮಹಾಪಾತಕಗಳನ್ನು ಮಾಡಲು ದ್ಯುಕ್ತನಾಗಿರುವೆಯಲ್ಲವೆ?'' ಎಂದು ನುಡಿಯಲು, ವೀರಸೇನನು ಪುಲಿಕೇಶಿಗೆ ದೀರ್ಘದಂಡ ಪ್ರಣಾಮ ಮಾಡಿ:—

"ಮಹಾರಾಜರೇ! ನಾನು ನಿಜವಾಗಿಯೂ ನಿಷ್ಪಾಪಿಹೃದಯಿ ಯಿರುವೆನು. ಪರೀಕ್ಷಿಸಬೇಕಾಗಿದ್ದರೆ, ಈ ಖಡ್ಗದಿಂದ ಈ ಹೃದಯ ವನ್ನು ಸೀಳಿ, ಮನಗಾಣಿರಿ!''



# ವಾತಾಪಿಪುರದ ಬಳಿಯ ಅರಣ್ಯದಲ್ಲಿ.

ಮಧ್ಯರಾತ್ರಿಯ ಸಮಯವಾಗಿತ್ತು. ಎಲ್ಲೆಡೆಯಲ್ಲಿಯೂ ಘೋ
ವಾದ ತಮವು ಮುಸುಕಿ, ಸೃಷ್ಟಿಯನ್ನು ಭೀಷಣವಾದ ಪರಿ
ಯಲ್ಲಿ ತಂದು ಬಿಟ್ಟಿತ್ತು. ವಾತಾಪಿಪುರದ ನೆರೆಯ ಅರಣ್ಯ
ಹಿಂಸ್ರಪಶುಗಳ ಗರ್ಜನೆಯೂ, ನಾನಾವಿಧವಾದ ಕ್ರಿಮಿ-ಕೀಟಕ
'ಸುಂಯ್-ಸುಂಯ್' ಸಪ್ಪಳವೂ, ವಾಯುವಿನ ಶೀಘ್ರಲಹರಿಯಿ
ಗಿಡಗಳಿಂದುಂಟಾಗುವ 'ಫಟ್‌ಫಟ್' ಎಂಬ ಸಪ್ಪಳವೂ ಎಲ್ಲೆಡ
ಲ್ಲಿಯೂ ವ್ಯಾಪಿಸಿ, ಕಾನನದಲ್ಲಿ ಭಯವುಂಟಾಗುವಂತೆ ಮಾಡಿ
ದಟ್ಟವಾಗಿ ನಕ್ಷತ್ರಪ್ರಕಾಶಕ್ಕೆ ಸಹ ಇಂಬುಗೊಡದಂತೆ ಬೆಳೆದ ಅ
ಯಲ್ಲಿ ಇಂತಹ ಅಂಧಕಾರದ ಮಧ್ಯರಾತ್ರಿಯ ಸಮಯದಲ್ಲಿ ಒ
ರಾವುತನು ಅಶ್ವಾರೂಢನಾಗಿ ಸಾಗಿದ್ದನು. ಅವನು ಕೆಲವು ಹ
ಯನ್ನು ನಡೆದ ಬಳಿಕ ಸುಮಾರು ಇಪ್ಪತ್ತು-ಇಪ್ಪತ್ತೈದು ಜ
ಹಿಂದು ಗಿಡದ ಬುಡದಲ್ಲಿ ಬೆಂಕಿಯನ್ನು ಹೊತ್ತಿಸಿ ಕಾಯಿಸಿಕೊಳ್ಳ
ಕುಳಿತಿದ್ದನ್ನು ಕಂಡನು. ಆ ರಾವುತನು ಅಲ್ಲಿಗೆ ಹೋಗಿ ಆ ಜ
ಮುಖ್ಯಸ್ಥನಿಗೆ ನಮಸ್ಕಾರ ಮಾಡಿ, ಕುದುರೆಯಿಂದಿಳಿದು:—

"ಪ್ರತಾಪವರ್ಮರೇ, ಚಂದ್ರಸೇನರು ತಮ್ಮ ಕಡೆಗೆ ಸಂ
ವನ್ನು ಕಳುಹಿಸಿರುವರಾದ್ದರಿಂದ ನಾನು ಇಲ್ಲಿಗೆ ಬಂದೆನು."

ರಾವುತನ ಈ ಮಾತುಗಳನ್ನು ಕೇಳಿದ ಕೂಡಲೆ ಪ್ರತಾ
ವರ್ಮನು ಅವನ ಮುಖವನ್ನೊಮ್ಮೆ ದಿಟ್ಟಿಸಿ ನೋಡಿದನು.
ಅವನ ಗುರುತು ಹತ್ತಲು, ಕ್ರೋಧಯುಕ್ತಮುದ್ರೆಯಿಂದ:—

"ಯಾರು? ನಯನಸೇನನೇನು? ಯಾಕೆ? ನೀನು
ಏಕೆ? ಶತ್ರುಪಕ್ಷೀಯನಾದ ನಿನಗೆ ಇಲ್ಲಿಯ ವರೆಗೆ ಪ್ರ
ಮಾಡುವದಕ್ಕೆ ಹೇಗೆ ಸಾಧಿಸಿತು?"

"ಇಂದು ಮಧ್ಯರಾತ್ರಿಗೆ ಇಲ್ಲಿಗೆ ಬರುವಿರೆಂಬ ವರ್ತಮಾ
ನಿಮ್ಮ ಗುಪ್ತಚಾರನ ಮುಖಾಂತರವಾಗಿ ತಿಳಿಯಿತು."

"ಏನು? ನಮ್ಮ ಗುಪ್ತಚಾರನಿಂದ ನಿನಗೆ ತಿಳಿಯಿತೋ?"

"ಹೌದು. ಮಂಗಳೇಶನ ಗುಪ್ತಚಾರರು ನಿಮ್ಮ ದೂತನನ್ನು ಹಿಡಿದು ಚಂದ್ರಸೇನರ ಬಳಿಗೆ ತಂದರು. ಅವರು ನಿಮ್ಮ ಚಾರನನ್ನು ತಮ್ಮ ಬಳಿಯಲ್ಲಿರಿಸಿಕೊಂಡು, ನಿಮ್ಮ ಪತ್ರಕ್ಕೆ ಸರಿಯಾಗಿ ಸಂದೇಶವನ್ನು ಕಳುಹಿಸಿರುವರು."

"ನಮ್ಮ ಚಾರನು ನಿಮ್ಮಲ್ಲಿ ಸೆರೆಯಾಳಾಗಿರುವನು; ಸೇನಾಪತಿಯಾದ ನೀನು ನಮ್ಮ ಸೆರೆಯಾಳಾದೆ!"

"ಇಗೋ, ಈ ಪತ್ರವನ್ನೋದಿದರೆ ನಿಮ್ಮ ಭ್ರಮೆಯು ನಾಶವಾಗುವದು" ಎಂದು ನಯನಸೇನನು ಪತ್ರವನ್ನು ಪ್ರತಾಪವರ್ಮನ ಸ್ವಾಧೀನ ಮಾಡಿದನು.

ಪ್ರತಾಪವರ್ಮನು ಪತ್ರವನ್ನೋದಿಕೊಂಡನು. ಕೂಡಲೆ ಅವನ ಮುಖಮುದ್ರೆಯು ಆನಂದಮಯವಾಯಿತು; ಪರಕ್ಷಣದಲ್ಲಿ ಸಂಶಯಯುಕ್ತವೂ ಆಯಿತು. ಶತ್ರುಪಕ್ಷಪಾತಿಯಾದ ತಾನು ಬಹಿರಂಗದಲ್ಲಿ ಮಂಗಳೇಶನ ಪಕ್ಷವನ್ನು ವಹಿಸಿದ್ದರೂ, ಅಂತರಂಗವು ಪುಲಿಕೇಶಿಮಹಾರಾಜರದಿರುತ್ತದೆಂದೂ, ತನ್ನ ಮಾತಿನ ಸತ್ಯತೆಯ ಬಗ್ಗೆ ಶ್ರೀ ಮುಕುಟೇಶ್ವರನಾಥನು ಸಾಕ್ಷೀಭೂತನಾಗಿರುತ್ತಾನೆಂದೂ ಚಂದ್ರಸೇನನು ಬರೆದಿದ್ದನು. ಪ್ರಸಂಗ ಬಂದಾಗ ಸಹಾಯವನ್ನು ಯಾಚಿಸಿದೊಡನೆಯೇ ಬರಬೇಕೆಂದು ಅವನು ಬೇಡಿಕೊಂಡಿದ್ದನು. ಆಗ ಪ್ರತಾಪವರ್ಮನು ಸ್ವಲ್ಪ ಹೊತ್ತಿನ ವರೆಗೆ ವಿಚಾರದಲ್ಲಿ ಮಗ್ನನಾಗಿ ತಟಸ್ಥವೃತ್ತಿಯಿಂದ ಕುಳಿತನು. ಆಗ ಅವನಿಗೆ ಏನು ತಿಳಿಯಿತೋ ಯಾರು ಬಲ್ಲರು? ಅವನು ನಯನಸೇನನಿಗೆ:—

"ನಯನಸೇನಾ, ಚಂದ್ರಸೇನನ ಸಂದೇಶವು ಶಿರಸಾ ಮಾನ್ಯವಿರುವದು. ನಾನು ಈಗಲೆ ಸತ್ಯವರ್ಮರ ಕಡೆಗೆ ಈ ವಿಷಯಕ್ಕಾಗಿ ಬರೆದು ತಿಳಿದುಕೊಳ್ಳುವೆನು."

"ಪ್ರತಾಪವರ್ಮರೆ, ನೀವು ಚಂದ್ರಸೇನರ ವಿಷಯಕ್ಕೆ ತಿಲಾಂಶವಾದರೂ ಸಂಶಯ ಪಡಬೇಡಿರಿ. ಅವರು ಮೊದಲಿನಿಂದ

ಮಂಗಳೇಶರ ವಿಷಯಕ್ಕೆ ಕನುಸುಳ್ಳವರಿರುವರು ತಮ್ಮ ಕಾರ್ಯ ಸಾಧನೆಗಾಗಿಯೇ ಅವರು ಓಲಗದಲ್ಲಿ ಸೇವಾವೃತ್ತಿಯನ್ನು ಕೈಕೊಂಡಿರುವರು ''

"ನೀವು ನಮ್ಮ ಪಕ್ಷದವರೆಂಬ ನಂಬಿಗೆಯಾಗುವವರೆಗೆ ನಾನು ಚಂದ್ರಸೇನನಿಗೆ ಯಾವ ಬಗೆಯಿಂದಲೂ ವಚನ ಕೊಡಲಾರೆನು ರಾಜಕಾರಣದಲ್ಲಿ ಇಂಥ ಅನೇಕ ಕಾರಸ್ಥಾನಗಳು ರಚಿಸಲ್ಪಡುತ್ತಿರುವವು. ಸತ್ಯವರ್ಮರ ಹಾಗು ನನ್ನ ಕಾರ್ಯನಿವೃತ್ತಿಗೆ ಚಂದ್ರಸೇನನೇ ಕಾರಣೀಭೂತನಿರುವನು. ಅವನು ಹಿಮ್ಮೆಲೆ ನಮ್ಮ ಪಕ್ಷವನ್ನು ವಹಿಸಿರುವನೆಂಬ ಮಾತು ಸಂಶಯಕ್ಕೆ ಕಾರಣವಾಗದೇನು ಮಾಡೀತು!"

"ಪ್ರತಾಪಸವರ್ಮರೇ, ಚಂದ್ರಸೇನರ ಕಾರಸ್ಥಾನವು ಅತ್ಯದ್ಭುತವಾದದ್ದಿರುವದು. ಅವರು ಎಂದು ವಾತಾಪಿಪುರದ ಓಲಗವನ್ನು ಪ್ರವೇಶಿಸಿರುವರೋ, ಅಂದಿನಿಂದ ಮಂಗಳೇಶರ ನಾಶದ ಬಗ್ಗೆಯೂ ಪುಲಿಕೇಶಿ ಮಹಾರಾಜರ ಕಲ್ಯಾಣದ ಬಗ್ಗೆಯೂ ಪ್ರಯತ್ನಿಸುತ್ತಲಿರುವರು ನಿಮ್ಮನ್ನು ಹಾಗು ಸತ್ಯವರ್ಮರನ್ನು ಪದಚ್ಯುತಗೊಳಿಸಿದ್ದು ಪುಲಿಕೇಶಿಮಹಾರಾಜರ ಹಿತಕ್ಕಾಗಿಯೆಂಬದು ಕಾಲಾಂತರದಿಂದ ಎಲ್ಲರ ಅನುಭವಕ್ಕೂ ಬರುವದು.''

"ನಯನಸೇನಾ, ಸದ್ಯಕ್ಕೆ ನಾನು ನಿನ್ನ ಮೇಲೆಯೂ, ಚಂದ್ರಸೇನನ ಮೇಲೆಯೂ ಇಡತಕ್ಕಷ್ಟು ವಿಶ್ವಾಸವಿಡಲಾರೆನೆಂದು ನಿದಾಕ್ಷಿಣ್ಯದಿಂದ ಹೇಳದಿರೆನು. ನಾನು ಈಗಲೆ ವಾತಾಪಿಪುರಕ್ಕೆ ಗುಪ್ತ ಚಾರನನ್ನು ಕಳುಹಿಸುವೆನು. ಸತ್ಯವರ್ಮರಿಂದ ಯಾವ ಬಗೆಯ ಅಜ್ಞೆಯು ದೊರೆಯುವದೋ, ಅದರಂತೆ ನಡೆಯುವದಕ್ಕೆ ನಾನು ಸಿದ್ಧನಿರುವೆನು ನೀನೂ, ನಿಮ್ಮ ಚಂದ್ರಸೇನನೂ ಪುಲಿಕೇಶಿಮಹಾರಾಜರ ವಿಷಯಕ್ಕೆ ಹಾಗು ಅವರ ಕರ್ನಾಟಕ ಸಾಮ್ರಾಜ್ಯದ ವಿಷಯಕ್ಕೆ ನಿರ್ಮಲವಾದ ಭಕ್ತಿಯುಳ್ಳವರಾಗಿದ್ದರೆ ಮತ್ತು ಮಂಗಳೇಶನ ವಿಷಯಕ್ಕಾಗಿ ಕನುಸುಳ್ಳವರಿದ್ದರೆ, ನಾನು ನಿನಗೂ ಚಂದ್ರಸೇನನಿಗೂ ಪೂರಾ ಋಣಿಯಾಗುವೆನು. ನಿನ್ನ ಮಾತಿನಲ್ಲಿ

ರವಷ್ಟಾದರೂ ಕಪಟ ಕಾರಸ್ಥಾನದ ಗಂಧವು ಹೊರಟರೆ, ಅದಕ್ಕೆ ತಕ್ಕ ಪ್ರಾಯಶ್ಚಿತ್ತವು ದೊರೆಯದಿರಲಾರದು. ನಮ್ಮ ದೂತನು ವಾತಾಪಿಪುರದಿಂದ ಬರುವವರೆಗೆ ನೀನು ನಮ್ಮ ಕಣ್ಣೆದುರಿನಲ್ಲಿರ ಬೇಕಾಗುವದು. ರಾಜಕಾರಣದಲ್ಲಿ ಸಂಪೂರ್ಣವಾಗಿ ಧೂರ್ತತನ ದಿಂದ ನಡೆಯದಿದ್ದರೆ ಗತ್ಯಂತರವಿಲ್ಲ. ನಯನಸೇನಾ, ನಮ್ಮ ಗುಪ್ತಚಾರನನ್ನು ಚಂದ್ರಸೇನನು ತನ್ನ ಬಳಿಯಲ್ಲಿಟ್ಟುಕೊಂಡ ಕಾರಣವೇನು?''

"ಚಂದ್ರಸೇನರು ಅವನನ್ನು ಬುದ್ಧಿಪೂರ್ವಕವಾಗಿ ತಮ್ಮ ಬಳಿ ಯಲ್ಲಿಟ್ಟುಕೊಂಡಿರುವರು. ತಾವು ಪುಲಿಕೇಶಿಯ ಪಕ್ಷದವರಿರುವೆ ವೆಂಬ ನಂಬಿಗೆಯನ್ನುಂಟು ಮಾಡಿಕೊಟ್ಟು ಅವನನ್ನು ನಿಮ್ಮ ಕಡೆಗೆ ಕಳುಹಿಸಿದರೆ, ನೀವು ಅವರಲ್ಲಿ ವಿಶ್ವಾಸವುಳ್ಳವರಾಗುವಿರೆಂಬ ಧೋರ ಣದಿಂದ ಹೀಗೆ ಮಾಡಿರುವರಲ್ಲದೆ, ಈ ವಿಷಯದಲ್ಲಿ ಅನ್ಯಥಾ ಭಾ- ವಿಸ ಕೂಡದು. ಪ್ರತಾಪವರ್ಮರೆ, ನಿಮ್ಮ ದೂತರನ್ನು ಸತ್ಯವರ್ಮರ ಕಡೆಗೆ ಕಳುಹಿಸಿ ನನ್ನ ಮಾತಿನ ಸತ್ಯತೆಯನ್ನು ಮನಗಾಣಿರಿ. ಚಂದ್ರ ಸೇನರು ಇಂದು-ನಾಳೆ ಇಷ್ಟರೊಳಗೆ ಪುಲಿಕೇಶಿಮಹಾರಾಜರ ಹಾಗು ಸತ್ಯವರ್ಮರ ಭೆಟ್ಟಿಯನ್ನು ತೆಗೆದುಕೊಂಡು, ಭಾವೀ ವ್ಯೂಹವನ್ನು ರಚಿಸಬೇಕೆಂದಿರುವರು. ಮಂಗಳೇಶನ ಮರಣದಿಂದ ಚಂದ್ರಸೇನರ ಕ್ರೋಧಾನಲವು ಶಾಂತವಾಗತಕ್ಕದ್ದಿರುವದು.''

"ನಯನಸೇನಾ, ಚಂದ್ರಸೇನನು ಮಂಗಳೇಶನ ವಿಷಯಕ್ಕೆ ಈ ಪರಿಯಾದ ಉಗ್ರಕೋಪವನ್ನು ತಳೆದ ಕಾರಣವೇನು?''

"ಪ್ರತಾಪವರ್ಮರೆ, ನಾನು ಹೇಳತಕ್ಕ ವಿಷಯಗಳನ್ನು ಅತ್ಯಂತ ಗುಪ್ತವಾಗಿರಿಸುವ ಅಭಿವಚನವಿತ್ತರೆ ಬಿನ್ನಯಿಸುವೆನು.''

"ಏನೂ ಚಿಂತೆಯಿಲ್ಲ. ಗುಪ್ತವಾದ ಸಂಗತಿಗಳನ್ನು ಬೈಲಿ ಗೆಳೆದು, ಪುಲಿಕೇಶಿ ಮಹಾರಾಜರ ಹಿತಕ್ಕೆ ಕುಂದು ತರಬೇಕೆಂದು ನಮ್ಮ ಇಚ್ಛೆಯಿಲ್ಲ ನೀನು ಎಲ್ಲ ಸಂಗತಿಯನ್ನೂ ವಿಶದವಾಗಿ ಹೇಳು.''

ಹೀಗೆ ಪ್ರತಾಪವರ್ಮನು ನುಡಿದ ಕೂಡಲೆ ನಯನಸೇನನು

ಎಲ್ಲ ಸಂಗತಿಯನ್ನು ಅವನ ಸಮ್ಮುಖದಲ್ಲಿ ಉಸಿರಿದನು. ಆಗ ಪ್ರತಾಪವರ್ಮನಿಗೆ ಪರಮಾಶ್ಚರ್ಯವಾಯಿತು. ಅವನು ಕೆಲವು ವೇಳೆಯವರೆಗೆ ಆನಂದ ಸೋಜಿಗಗಳಿಂದ ಕೂಡಿದವನಾಗಿ, ತಟಸ್ಥನಾಗಿ ಕುಳಿತು ಬಿಟ್ಟಿದ್ದನು.

"ಅಂತೂ ನೀವಿಬ್ಬರು ಸಹೋದರರು ಒಬ್ಬ ಬಲಾಢ್ಯನಾದ ಶತ್ರುವನ್ನು ರಸಾತಳಕ್ಕೆ ತುಳಿಯಬೇಕೆಂಬ ನಿಶ್ಚಯ ಮಾಡಿಕೊಂಡಿರುವಿರೆಂದಂತಾಯಿತು! ನಯನಸೇನಾ, ನೀನು ಈ ರೀತಿಯಿಂದ ವಿಶ್ವಾಸ ಮಾಡಿಕೊಟ್ಟರೂ ನಾನು ನನ್ನ ಕರ್ತವ್ಯಕ್ಕನುಸಾರವಾಗಿ ವಾತಾಪಿಪುರಕ್ಕೆ ಚರನನ್ನು ಕಳುಹಿಸುವೆನು. ಅವನು ತಿರುಗಿ ಬರುವ ವರೆಗೆ ನೀನು ನನ್ನ ಬಳಿಯಲ್ಲಿರಬೇಕಾಗುವದು. ನಿನ್ನ ಕಾರ್ಯಕ್ಕೆ ತೊಂದರೆ ಕೊಟ್ಟಿದ್ದಕ್ಕೆ ಕ್ಷಮಿಸು. ಮಹತ್ವದ ರಾಜಕಾರಣವಿರುವದರಿಂದ, ನಾನು ನನ್ನ ಹೊಟ್ಟೆಯ ಮಗನಲ್ಲಿ ಸಹಿತವಾಗಿ ಹೆಚ್ಚಾಗಿ ನಂಬಿಯನ್ನಿಡಲಾರೆನು."

ಪ್ರತಾಪವರ್ಮನ ಸಂಶಯ ಪಿಶಾಚಿಯು ಇನ್ನೂ ತೊಲಗಿ ಹೋಗಿಲ್ಲವೆಂದು ನಯನಸೇನನು ತಿಳಿದುಕೊಂಡನು. ಏನಾದರೊಂದು ನೆವ ಹೇಳಿ, ಇಲ್ಲಿಂದ ನುಸುಳುವದಕ್ಕೆ ಹೋದರೆ ಅವಿಶ್ವಾಸವುಂಟಾಗಬಹುದೆಂದು ತಿಳಿದು, ಅವನು:—

"ಪ್ರತಾಪವರ್ಮರೆ, ನಿಮ್ಮ ಮುತ್ಸದ್ದಿತನವು ಅವರ್ಣನೀಯವಿರುವದು ಅತ್ಯಂತ ಮಹತ್ವವಾದ ಕರ್ತವ್ಯಭಾರವನ್ನು ಬೇಗನೆ ಈಡೇರಿಸಬೇಕಾಗಿರುವಂತಹ ಸೂಕ್ಷ್ಮಸಂಧಿಯಿದ್ದು, ಅವೆಲ್ಲ ಕಾರ್ಯಗಳನ್ನು ಹೇಳುತ್ತ ಕುಳಿತರೆ ಸಂಶಯಯುಕ್ತವಾದ ನಿಮ್ಮ ಮನಸ್ಸಿನಲ್ಲಿ ನಿಷ್ಕಾರಣವಾಗಿ ಮತ್ತಿಷ್ಟು ವಿಕಲ್ಪವನ್ನು ಹುಟ್ಟಿಸಿದಂತಾಗುವದು. ನಿಮ್ಮ ದೂತನು ರಾಜಧಾನಿಗೆ ಹೋಗಿ ತಿರುಗಿ ಬರುವವರೆಗೆ ನಾನು ಇಲ್ಲಿಯೇ ಇರುತ್ತೇನೆ"

"ನಯನಸೇನಾ, ಮಂಗಳೇಶನ ಸಾಹಸವನ್ನು ನಿಷ್ಫಲಗೊಳಿಸಿ, ಪುಲಿಕೇಶಿಮಹಾರಾಜರಿಗೆ ಅವರ ಸಿಂಹಾಸನವು ಚಿರಸ್ಥಾಯಿಯಾಗಿ

ಉಳಿಯಬೇಕೆಂದು ನಾನು ಅವಿಶ್ರಾಂತಶ್ರಮದಿಂದ ಕಾರ್ಯ ಮಾ-
ಡುತ್ತ ಬಂದಿರುವೆನು. ನನ್ನ ಸೈನ್ಯವು ಮಂಗಳೇಶನ ಸೈನ್ಯಕ್ಕೆ
ಹಣಿಯದಂತಿದ್ದರೂ, ವಿಜಯ ಸಂಪಾದನೆ ಮಾಡಿಯೇ ತೀರುವೆ
ವೆಂದು ನಿಶ್ಚಯವಾಗಿ ಹೇಳುವಷ್ಟು ಪ್ರಬಲವಾದದ್ದಿಲ್ಲ. ನನಗೆ
ನಿನ್ನ ಸೈನ್ಯದ ಬೆಂಬಲವು ದೊರೆಯಿತೆಂದರೆ ಆ ನೀಚ ಮಂಗಳೇಶನ
ಹಾಗು ರಾಷ್ಟ್ರದ್ರೋಹಿಯಾದ ಶಿವವರ್ಮನ ಪ್ರಾಣಗಳನ್ನು ಹೀರ
ದಿರಲಾರೆನು!''

ಎಂದು ಆವೇಶಯುಕ್ತಧ್ವನಿಯಿಂದ ಪ್ರತಾಪವರ್ಮನು ನುಡಿ
ದನು. ಕೂಡಲೆ ಒಬ್ಬ ಚರನನ್ನು ಕರೆದು, ಚಂದ್ರಸೇನನ ಹಾಗು
ನಯನಸೇನನ ವಿಷಯಕ್ಕೆ ಎಲ್ಲ ಸಂಗತಿಯನ್ನು ತಿಳಿದುಕೊಂಡು
ಬರುವದಕ್ಕಾಗಿ ಸತ್ಯವರ್ಮನ ಬಳಿಗೆ ಹೋಗಿ ಬರುವದಕ್ಕೆ ಆಜ್ಞಾಪಿ
ಸಿದನು.

ಸತ್ಯವರ್ಮನನ್ನು ಭೆಟ್ಟಿಯಾಗಿ ಆಪ್ತಾಲೋಚನೆ ಮಾಡಬೇ
ಕೆಂದು ಪ್ರತಾಪವರ್ಮನು ವಾತಾಪಿಪುರದ ನೆರೆಯ ಅರಣ್ಯಕ್ಕೆ
ಮಧ್ಯರಾತ್ರಿಯಲ್ಲಿ ಬಂದಿದ್ದನು. ಆ ಚರನು ಚಂದ್ರಸೇನನ ಬಳಿ
ಯಲ್ಲಿಯೇ ಉಳಿದದ್ದರಿಂದ ಅವನಿಗೆ ಸತ್ಯವರ್ಮನ ಭೆಟ್ಟಿಯಾಗು
ವದು ಶಕ್ಯವಿದ್ದಿಲ್ಲ. ವಾತಾಪಿಪುರಕ್ಕೆ ಹೋದ ಚರನು ಬರುವ
ವರೆಗೆ ರಾಜಧಾನಿಯ ಬಳಿಯ ಈ ಅರಣ್ಯದಲ್ಲಿರುವದು ಸಂಕಟಪ್ರದ
ವೆಂದು ತಿಳಿದು, ಪ್ರತಾಪವರ್ಮನು ತನ್ನ ಗುಪ್ತನಿವಾಸಕ್ಕೆ ಅನುಚರ
ರೊಡನೆ ಹೊರಡುವದಕ್ಕೆ ಸಿದ್ಧನಾದನು. ನಯನಸೇನನಾದರೂ
ಅವನ ಜೊತೆಯಲ್ಲಿಯೇ ಹೊರಡಬೇಕಾಯಿತು.

ಅರುಣೋದಯವಾಗಿತ್ತು. ಪ್ರಾತಃಕಾಲದ ಸುಳಿಗಾಳಿಯು
ಸುಳ್ಳನೆ ಸುಳಿಯತೊಡಗಿತ್ತು. ಚಳಿಯು ಕಟಗುಟ್ಟಿ ನಡುಗಿಸ
ತೊಡಗಿತ್ತು. ವನದೊಳಗಿನ ಹಿಂಸ್ರಪಶುಗಳ ಸೊಲ್ಲು ಇಲ್ಲದಂತಾ
ಗಿತ್ತು. ಮೆಲ್ಲಮೆಲ್ಲನೆ ತಮವು ಕಾಲ್ದೆಗೆಯ ತೊಡಗಿತ್ತು. ಇನ್ನು
ಸ್ವಲ್ಪ ಹೊತ್ತಿನಲ್ಲಿ ಜಗಚ್ಚಕ್ಷುವಾದ ದಿವಾಕರನು ಉದಯಿಸುವ

ನೆನ್ನುವಷ್ಟರಲ್ಲಿ ಪ್ರತಾಪವರ್ಮನು ತನ್ನ ಸಂಗಡಿಗರೊಡನೆ ಆ ಅರಣ್ಯ ದಿಂದ ಹೊರಟು ಎತ್ತೋ ಮಾಯವಾಗಿದ್ದನು!

---

## ಭ್ರಮನಿರಸನ.



ವಿಜಯಾಂಬಿಕೆಗೂ ಪುಲಿಕೇಶಿಗೂ ತನ್ನ ವಿಷಯಕ್ಕೆ ಸಂಶಯ ಪಿಶಾಚಿಯು ಬಡೆದಿರುವದೆಂದು ಚಂದ್ರಸೇನನು ಭಾವಿಸಿದನು. ಸೇಡು ತೀರಿಸಿಕೊಳ್ಳುವದಕ್ಕೆ ಕಾಲಕ್ರಮಣವಾದುದರಿಂದಲೂ, ಸತ್ಯವರ್ಮ-ಪ್ರತಾಪವರ್ಮರನ್ನು ಪದಚ್ಯುತರನ್ನಾಗಿ ಮಾಡಿಸಿದ್ದರಿಂದಲೂ ಅವರು ಶಂಕಾಗ್ರಸ್ತರಾಗಿರುವರೆಂದು ಅವನು ತಿಳಿದನು. ಆಗ ಅವನು ಆ ದಂಪತಿಗಳ ಸಂಶಯ ನಿವಾರಣೆಗಾಗಿ ಎಷ್ಟು ಬಗೆಯಿಂದ ಹೇಳಿದರೂ ಅವರು ಒಪ್ಪದೆ, ತನ್ನ ಮೇಲೆ ಅಪವಾದವನ್ನು ಹೊರಿಸತೊಡಗಿದ್ದನ್ನು ನೋಡಿ ಅವನು ಮುಂದುಗಾಣದಾದನು.

"ವಿಜಯಾಂಬಿಕೇ! ಅಲ್ಲಲ್ಲ! ಮಹಾರಾಣಿಯವರೇ!" ಎಂದು ಚಂದ್ರಸೇನನು ನುಡಿಯಲು, ವಿಜಯಾಂಬಿಕೆಯು:—

"ಅಣ್ಣಾ ವೀರಸೇನಾ! ನಾನು ಮಹಾರಾಣಿ ಪದದಿಂದ ಚ್ಯುತಳಾಗಿರುವೆನೆಂದು ಹೀಗೆ ಚುಚ್ಚಿ ಮಾತನಾಡುವೆಯಲ್ಲವೆ? ನೀನು ನಿರ್ಮಲಾಂತಃಕರಣಿಯಿದ್ದರೆ, ಮಹಾರಾಣಿ ಪದದಿಂದ ಚ್ಯುತಳಾಗಿದ್ದರೂ ಭಗಿನೀಪದದಿಂದ ಚ್ಯುತಳಾದಂತಾಗುವದಿಲ್ಲವಾದ್ದರಿಂದ, ನನಗೆ ಲಾವಣ್ಯವತಿ, ವಿಜಯಾಂಬಿಕೆ ಎಂದು ಕರೆಯುವದರಿಂದ ಹೆಚ್ಚಾಗಿ ಆನಂದವಾಗುತ್ತದೆ."

"ವಿಜಯಾಂಬಿಕೇ! ನೀನು ಮಹಾರಾಜ್ಞಿ ಪದದಿಂದ ಚ್ಯುತಳಾದವಳೆಂದು ಯಾರು ಹೇಳುತ್ತಾರೆ? ಮಾನಸಭಗಿನಿಯಾದ ನಿನ್ನನ್ನು ಮಹಾರಾಜ್ಞಿ ಪದದಲ್ಲಿ ಸ್ಥಿರವಾಗಿ ಉಳಿಸದಿದ್ದರೆ ನನ್ನ ತಂದೆಯಾದ ಸ್ವಾಮಿರಾಜರ ಕೊಲೆಯನ್ನು ಮಂಗಳೇಶನು ಮಾಡದೆ, ನಾನೇ ಮಾಡಿದಂತಾಗುವದೆಂದು ಭಾವಿಸಿರುವೆನು."

"ಅಣ್ಣಾ ವೀರಸೇನಾ, ನೀನು ಇಷ್ಟು ದೃಢನಿಶ್ಚಯದವನಾಗಿದ್ದರೆ, ನಿನ್ನಿಂದ ಅನೇಕ ಬಗೆಯ ವಿಪರೀತ ಕೃತಿಗಳು ಘಟಿಸಲೇನು ಕಾರಣವು? ತ್ಯವರ್ಮರ ಹಾಗು ಪ್ರತಾಪವರ್ಮರ ಮಂತ್ರಿ-ಸೇನಾಪತಿ ಪದಗಳನ್ನು ಕಸಿದುಕೊಳ್ಳುವದಕ್ಕೆ ನೀನೇ ಕಾರಣನಾದೆಯಲ್ಲವೆ? ಮಹಾರಾಜರನ್ನು ಸೆರೆ ಹಿಡಿಯುವ ವರೆಗೆ ಪ್ರಸಂಗವನ್ನು ತಂದವನು ನೀನೇ ಅಲ್ಲವೆ? ಕೊಲೆ-ಸುಲಿಗೆ ಮೊದಲಾದ ಅತ್ಯಾಚಾರಗಳಿಗೆ ಆಸ್ಪದವಿತ್ತವನು ನೀನೇ ಅಲ್ಲವೆ? ಮಹಾರಾಜರ ಪಕ್ಷದವರನ್ನು ಭೀಷಣವಾದ ಪ್ರಕಾರದಿಂದ ಕೊಲೆ ಮಾಡಿಸಿದ್ದರ ಅಪಯಶವು ನಿನ್ನ ತಲೆಯ ಮೇಲಿರುವದಿಲ್ಲವೆ?"

"ತಂಗೀ, ಲಾವಣ್ಯವತೀ! ಈ ಎಲ್ಲ ಕಾರ್ಯಗಳಿಗೆ ನಿಮಿತ್ಯಮಾತ್ರನಾಗಿ ನಾನೇ ಕಾರಣೀಭೂತನಾಗಿದ್ದರೂ, ಇವೆಲ್ಲ ಅತ್ಯಾಚಾರಗಳಿಗೆ ನಾನು ಪ್ರೋತ್ಸಾಹನೆ ಕೊಟ್ಟಿದ್ದರೂ ಎಲ್ಲ ಕಾರ್ಯಗಳು ಪುಲಿಕೇಶಿ ಮಹಾರಾಜರ ಹಿತಕ್ಕಾಗಿಯೆಂಬದು ಕ್ರಮೇಣ ತಿಳಿದು ಬರುತ್ತವೆ. ಸತ್ಯವರ್ಮ-ಪ್ರತಾಪವರ್ಮರನ್ನು ಪದಚ್ಯುತಗೊಳಿಸದಿದ್ದರೆ, ಅವರಿಂದ ಮಂಗಳೀಶನನ್ನು ಹಣಿಯುವ ಕಾರಸ್ಥಾನವು ರಚಿಸಲ್ಪಡುತ್ತಿರಲಿಲ್ಲ. ನಾನೂ ನನ್ನ ಬಂಧುವಾದ ವಿಮಲಸೇನನೂ ಮಂತ್ರಿ-ಸೇನಾಧಿಪತ್ಯವನ್ನು ಕೈಕೊಂಡದ್ದರಿಂದ ಅರ್ಧ ರಾಜ್ಯಸೂತ್ರಗಳು ನಮ್ಮ ಕೈಯಲ್ಲಿದ್ದಂತಾಗಿರುವವು. ಇನ್ನು ಶಿವವರ್ಮನು ಕೇವಲ ಮಂಗಳೀಶನ ಪಕ್ಷಪಾತಿಯಿರುವನು; ಅವನ ಬಲವನ್ನು ನಾಶಮಾಡುವದಕ್ಕೆ ವಿಮಲಸೇನನ ಸೈನ್ಯವೂ, ಪ್ರತಾಪವರ್ಮರ ಸೈನ್ಯವೂ ಸಾಕಾಗಿರುವದು. ನಿನ್ನೆ ಪ್ರತಾಪವರ್ಮರ ಬಳಿಗೆ ವಿಮಲಸೇನನನ್ನು ಕಳುಹಿಸಿರುವೆನು. ವಾತಾಪಿಪುರದ ಅರಣ್ಯದಲ್ಲಿ ಬರುವೆನೆಂದು ಸತ್ಯವರ್ಮರ ಕಡೆಗೆ ಅವನು ಗುಪ್ತಚಾರನನ್ನು ಕಳುಹಿಸಿ, ತಮ್ಮ ಭೆಟ್ಟಿಗಾಗಿ ಬರಬೇಕೆಂದು ಅವರಿಗೆ ತಿಳಿಸಿದ್ದನು. ಇಗೊಳ್ಳಿರಿ, ಅವರ ಪತ್ರವನ್ನು!" ಎಂದು ನುಡಿದು, ಚಂದ್ರಸೇನನು ತನ್ನಲ್ಲಿದ್ದ ಪತ್ರವನ್ನು ಪುಲಿಕೇಶಿಯ ಕೈಯಲ್ಲಿ ಕೊಟ್ಟನು:—ಪ್ರತಾಪವರ್ಮರ

ಚರನನ್ನು ಮಂಗಳೇಶನ ಗುಪ್ತಚಾರರು ಹಿಡಿದು ನನ್ನ ಬಳಿಗೆ ತಂದರು. ಅವನು ಇಲ್ಲಿಯೇ ನಿಂತಿರುವನು.'' ಎಂದು ನುಡಿದು, ಚಂದ್ರಸೇನನು ಆ ದೂತನನ್ನು ಕರೆದನು. ಆಗ ಅವನು ಪುಲಿಕೇಶಿಗೆ ವಂದಿಸಿ:—

"ಮಂಗಳೇಶನ ಪಕ್ಷದವರಾದ ಈ ಮಂತ್ರಿಗಳು ಅಂತರಂಗದಲ್ಲಿ ನಿಮ್ಮ ಪಕ್ಷದವರಿರುವೆವೆಂಬ ನಂಬಿಗೆಯಾಗುವದಕ್ಕಾಗಿ ಇಲ್ಲಿಗೆ ನನ್ನನ್ನು ಕರೆತಂದರು.''

"ಚಂದ್ರಸೇನನ ಕಾರಸ್ಥಾನಗಳು ಆಶ್ಚರ್ಯಕಾರಕವಿರುವವು. ಇವನ ವಿಷಯಕ್ಕೆ ನನಗೆ ಯಾವ ವಿಧದ ಅಭಿಪ್ರಾಯವನ್ನೂ ವ್ಯಕ್ತಪಡಿಸುವದಕ್ಕೆ ಮಾರ್ಗವಿಲ್ಲದಾಗಿದೆ.'' ಎಂದು ಪುಲಿಕೇಶಿಯು ನುಡಿಯಲು,—

"ಇನ್ನೂ ನಿಮ್ಮನ್ನು ಸಂಶಯ ಪಿಶಾಚಿಯು ತೊಲಗಿಲ್ಲವೆಂಬಂತೆ ಕಾಣುತ್ತದೆ. ಉಪಾಯವಿಲ್ಲ. ನಾನಂತೂ ನನ್ನ ಕಾರ್ಯವನ್ನು ನಿಷ್ಠೆಯಿಂದ ಮಾಡುವದಕ್ಕೆ ಹಿಂಜರಿಯುವದಿಲ್ಲ. ಮಂಗಳೇಶನ ಕೊಲೆ ಮಾಡುವದು ನನಗೀಗ ಅಸಾಧ್ಯವಿರುವದಿಲ್ಲ. ಅವನ ಕೊಲೆಯಾದ ಮಾತ್ರದಿಂದ ನನ್ನ ಮನಸ್ಸು ತೃಪ್ತಿಯಾಗುವಂತಿಲ್ಲ. ಅವನ ಪರಿವಾರವು ಪ್ರಬಲವಿರುವದರಿಂದ ಮಂಗಳೇಶನ ಪಶ್ಚಾತ್ ಅವನ ಪುತ್ರನಾದ ಇಂದ್ರವರ್ಮನನ್ನು ಪಟ್ಟಕ್ಕೆ ಕುಳ್ಳಿರಿಸಬಹುದೆಂಬ ಭಯವಿದ್ದುದರಿಂದ, ಅವನ ಪಕ್ಷವು ನಿರ್ಮೂಲವಾಗುವಂತೆ ಮಾಡಬೇಕೆಂದು ನನ್ನ ಸಾಹಸವಿರುವದು. ಹೀಗೆ ನನ್ನ ಕಾರ್ಯವು ಈಡೇರಿದರೆ ನಿಮ್ಮ ಸಾಮ್ರಾಜ್ಯವು ನಿಮ್ಮ ಕೈಯಲ್ಲಿ ಸ್ಥಿರವಾಗಿ ಉಳಿಯುವ ಸಂಭವವುಂಟು. ನನ್ನ ಮನೋಬಯಕೆಯು ಈಡೇರಬೇಕೆಂದೂ, ಅದರೊಡನೆ ನನ್ನ ಭಗಿನಿಯ ಹಿತವು ಸಾಧಿಸಬೇಕೆಂದೂ ಇಚ್ಛೆಯುಳ್ಳವನಿರುವೆನಾದ್ದರಿಂದ, ಮಂಗಳೇಶನ ಆಯುರ್ಮರ್ಯಾದೆಯು ಇಲ್ಲಿಯ ವರೆಗೂ ಬೆಳೆಯಿತು. ಇನ್ನು ಸ್ವಲ್ಪ ದಿನಗಳಲ್ಲಿ ಅವನ ಅಂತಕಾಲವು ಪ್ರಾಪ್ತವಾಗತಕ್ಕದ್ದಿರುವದು."

"ಅಣ್ಣಾ, ಮಂಗಳೇಶ ಮಾವಂದಿರ ಕೊಲೆಯಾಗದೆ, ಮಹಾ ರಾಜರಿಗೆ ಚಾಲುಕ್ಯಸಿಂಹಾಸನವು ದೊರೆಯಲಿಕ್ಕಿಲ್ಲವೇನು?" ಎಂದು ವಿಜಯಾಂಬಿಕೆಯು ಕನಿಕರದಿಂದ ನುಡಿದಳು.

"ವಿಜಯಾಂಬಿಕೇ! ನರಾಧಮನಾದ ಮಂಗಳೇಶನು ನಿಮ್ಮನ್ನು ನಾಶಗೊಳಿಸಿ ತಾನೇ ಚಾಲುಕ್ಯಸಾಮ್ರಾಜ್ಯದ ಸಮ್ರಾಟನೆನಿಸಿಕೊಳ್ಳ ಬೇಕೆಂದು ಹವಣಿಸುತ್ತಿರುವಾಗ, ಜೀವಂತ ಸ್ಥಿತಿಯಲ್ಲಿ ಅವನು ಸಾಮ್ರಾಜ್ಯವನ್ನು ನಿಮ್ಮ ವಶಕ್ಕೆ ಕೊಡುವದು ಅಸಂಭವನೀಯವು. ಮಳಲಲ್ಲಿ ಎಣ್ಣೆ ಹೊರಟಂತೆ, ಮಂಗಳೇಶನು ದಯಾಪೂರಿತ ನಾಗಿ ನಿಮಗೆ ಸಾಮ್ರಾಜ್ಯ ದಾನ ಮಾಡಿದರೂ ನಾನು ಅವನಿಗೆ ಜೀವದಾನ ಮಾಡುವಂತಿಲ್ಲ." ಅವನ ಕೊಲೆ ಮಾಡುವಾಗ ಮರಣ ವೊದಗಿದರೂ ಅದರ ಪರಿವೆಯು ನನಗಿರುವದಿಲ್ಲ.

ವೀರಸೇನನ ನಿಶ್ಚಯವನ್ನು ನೋಡಿ ಇವನಿಂದ ಮಂಗಳೇಶನ ಕೊಲೆಯಾಗುವದು ಖಂಡಿತವೆಂದು ಪುಲಿಕೇಶಿಗೆ ತಿಳಿಯಲು, ಅವನ ಕೋಮಲ ಹೃದಯವು ನೊಂದುಕೊಂಡಿತು

ವೀರಸೇನನು ಇಷ್ಟೆಲ್ಲ ಮಾತನಾಡಿದರೂ ಅವನ ವಿಷಯಕ್ಕೆ ಪುಲಿಕೇಶಿಯಲ್ಲಿ ಪೂರ್ಣವಿಶ್ವಾಸವು ಹುಟ್ಟಲಿಲ್ಲ. ಶತ್ರುಪಕ್ಷವನ್ನು ವಹಿಸಿದ ಇವನು, ಏನಾದರೊಂದು ಮೋಸದ ಮಾತು ಹೇಳಿ ಬಲೆ ಯಲ್ಲಿ ಹಾಕುವ ಹಂಚಿಕೆಯನ್ನು ತೆಗೆದಿರಲಿಕ್ಕಿಲ್ಲವೆಂದು ಅದಾರು ಹೇಳ ಬೇಕು? ಎಂದು ಅವನು ವಿಚಾರದಲ್ಲಿ ಮುಳುಗಿದ್ದನು. ಅಷ್ಟರಲ್ಲಿ ಸತ್ಯವರ್ಮನು ಅಲ್ಲಿಗೆ ಬಂದು ಪುಲಿಕೇಶಿಗೆ ನಮಸ್ಕಾರ ಮಾಡಿದನು. ಚಂದ್ರಸೇನನು ಅಲ್ಲಿರುವದನ್ನು ನೋಡಿ ಅವನಿಗೆ ಪರಮಾಶ್ಚರ್ಯ ವಾಯಿತು. ಆಗ ಅವನು ವಿಸ್ಮಯದಿಂದ—

"ಚಂದ್ರಸೇನರೇ! ನೀವು ಇಲ್ಲಿಯೇಕೆ?"

"ಮಂತ್ರಿಗಳೇ, ನೀವು ಇನ್ನು ನನ್ನನ್ನು ಚಂದ್ರಸೇನನೆಂದು ಸಂಬೋಧಿಸಬೇಡಿರಿ. ನನ್ನ ಹೆಸರು ವೀರಸೇನನೆಂದಿರುವದು." ಎಂದು ವೀರಸೇನನು ನುಡಿಯಲು, ಸತ್ಯವರ್ಮನು ಪುಲಿಕೇಶಿಯ

ಕೈಯಲ್ಲಿ ಒಂದು ಪತ್ರವನ್ನು ಕೊಟ್ಟನು. ಪುಲಿಕೇಶಿಯು ಆ ಪತ್ರ ವನ್ನು ಓದಿ ಆನಂದಮುದ್ರೆಯಿಂದ ಬಹುಮಾನಪೂರ್ವಕವಾಗಿ—

"ವೀರಸೇನರೇ, ನಿಮ್ಮ ವಿಷಯಕ್ಕೆ ನೆಲೆಗೊಂಡ ಸಂಶಯವು ದೂರವಾಯಿತು. ನಿಶ್ಚಯವಾಗಿ ನನ್ನ ಭ್ರಮನಿರಸನವಾಯಿತು. ನೀವು ನಮ್ಮ ಪಕ್ಷಪಾತಿಗಳೆಂಬದರ ಬಗ್ಗೆ ಪೂರ್ಣನಂಬಿಗೆಯಾಯಿತು" ಎಂದು ನುಡಿದು, ಅವನು ಸತ್ಯವರ್ಮನಿಗೆ ವೀರಸೇನನ ವಿಷಯದ ಎಲ್ಲ ಸಂಗತಿಯನ್ನೂ ಹೇಳಿದನು.

ಪ್ರಿಯವಾಚಕ ಮಹಾಶಯ, ಸತ್ಯವರ್ಮನು ಪುಲಿಕೇಶಿಯ ಕೈಯಲ್ಲಿ ಕೊಟ್ಟ ಪತ್ರವಾವುದೆಂಬದನ್ನು ತಿಳಿದುಕೊಳ್ಳುವದಕ್ಕೆ ತಾವು ಆತುರಗೊಂಡಿರಬಹುದಲ್ಲವೆ? ಪ್ರತಾಪವರ್ಮನೆ ಬಳಿಗೆ ಚಂದ್ರ ಸೇನನು ನಯನಸೇನ ಸೇನಾಪತಿಯನ್ನು ಸಂಧಾನಕ್ಕೆ ಕಳುಹಿಸಿದ್ದು ತಮ್ಮ ಸ್ಮರಣೆಯಲ್ಲಿರಬಹುದು. ಚಂದ್ರಸೇನನು ಮೋಸಗೊಳಿಸು ವದಕ್ಕೆ ಹೀಗೆ ಯತ್ನ ನಡೆಯಿಸಿರಬಹುದೆಂಬ ಸಂಶಯದಿಂದ ಪ್ರತಾಪವರ್ಮನು ನಯನಸೇನನನ್ನು ತನ್ನ ಬಳಿಯಲ್ಲಿಟ್ಟುಕೊಂಡು ಈ ಸಂಗತಿಯ ಬಗ್ಗೆ ನಿಜಸ್ಥಿತಿಯನ್ನು ತಿಳಿದುಕೊಳ್ಳುವದಕ್ಕಾಗಿ ಸತ್ಯವರ್ಮನ ಕಡೆಗೆ ಚರನನ್ನು ಕಳುಹಿಸಿದ್ದನು. ಚಂದ್ರಸೇನನು ತನಗೆ ಬರೆದ ಪತ್ರವನ್ನಾದರೂ ಜೊತೆಯಲ್ಲಿರಿಸಿದ್ದನು. ಈ ಎರಡೂ ಪತ್ರಗಳನ್ನು ಓದಿದ ಕೂಡಲೆ ಪುಲಿಕೇಶಿಯು ಚಂದ್ರಸೇನನಲ್ಲಿ ಅರ್ಥಾತ್ ವೀರಸೇನನಲ್ಲಿ ನಂಬಿಗೆಯುಳ್ಳವನಾದನು. ಅವನ ಕಾರ ಸ್ಥಾನವು ಅವರ್ಣನೀಯವಿರುವದೆಂಬದನ್ನು ಮನಗಂಡು ವಿಸ್ಮಯ ಚಕಿತನಾದನು. ಆಗ ಅವನು ಸತ್ಯವರ್ಮನನ್ನು ಕುರಿತು:—

"ಮಂತ್ರಿಗಳೇ, ವೀರಸೇನರೂ, ಇವರ ಬಂಧುಗಳಾದ ವಿಮ ಲಸೇನರೂ ನಮ್ಮ ಪಕ್ಷದವರಿರುವರು. ಈ ಉಭಯತರ ಸಹಾಯ ದಿಂದ ನಮ್ಮ ಕಾರ್ಯವು ನಿರಾತಂಕವಾಗಿ ಸಾಧಿಸತಕ್ಕದ್ದಿರುವದು."

ಕಡುತರ ವೈರಿಯಂತಿದ್ದ ಚಂದ್ರಸೇನನು ತಮ್ಮ ಹಿತಚಿಂತಕ ನೆಂದು ನಂಬಿಗೆಯಾದದ್ದರಿಂದ ಸತ್ಯವರ್ಮನು ಸಂಭ್ರಮಗೊಂಡನು.

ಸತ್ಪಕ್ಷಪಾತಿಯಾದ ಪರಮಾತ್ಮನು 'ಸತ್ಯಮೇವ ಜಯತೇ' ಎಂಬ ಸಿದ್ಧಾಂತ ವಾಕ್ಯವನ್ನು ಸತ್ಯಮಾಡುವದಕ್ಕಾಗಿ ಸದಾ ಸಿದ್ಧನಿರುವ ನೆಂದು ಅವನಿಗೆ ನಂಬಿಗೆಯಾಯಿತು. ಮಂಗಳೇಶನು ಎಂತಹ ಕಾರ ಸ್ಥಾನಿಯಿದ್ದರೂ, ಅವನ ಪರಿವಾರವು ಎಂತಹ ಪ್ರಬಲವಿದ್ದರೂ, ಅವನ ಸೇನಾಬಲವು ಎಂತಹ ಬಲಿಷ್ಠವಿದ್ದರೂ ಪುಲಿಕೇಶಿಯು ಅವನ ವ್ಯೂಹವನ್ನು ಮಣ್ಣುಪಾಲು ಮಾಡುವಷ್ಟು ವಿಕ್ರಮಶಾಲಿಯಾದ ನೆಂದು ಆ ಸ್ವಾಮಿನಿಷ್ಠನು ಸಂಭ್ರಮಗೊಂಡನು. ಆಗ ಅವನು ಪುಲಿಕೇಶಿಯನ್ನುದ್ದೇಶಿಸಿ:—

"ಮಹಾರಾಜರೇ, ಪ್ರತಾಪವರ್ಮರಿಗೆ ಏನೆಂದು ಸಂದೇಶ ವನ್ನು ಕಳುಹಿಸತಕ್ಕದ್ದು?"

"ನಿಮ್ಮ ಸಂದೇಶವು ಮುಟ್ಟದ ಹೊರತು ವಿಮಲಸೇನನ ಮುಕ್ತತೆಯಾಗುವಂತಿಲ್ಲ" ಎಂದು ವೀರಸೇನನು ನುಡಿದು:—ನಾನು ನಂಬುಗೆಯಾಗುವಂತೆ ತಿಳಿಸಿದ್ದರೂ, ವಿಮಲಸೇನನು ಎಷ್ಟು ವಿಧ ವಾಗಿ ವಿಶ್ವಾಸವು ಹುಟ್ಟುವಂತೆ ಹೇಳಿದ್ದರೂ, ಪ್ರತಾಪವರ್ಮರ ಸಂಶಯವು ನಿರಸನವಾಗಲಿಲ್ಲೆಂಬಂತೆ ತೋರುವದು"

"ವೀರಸೇನರೇ, ರಾಜಕಾರಣ ಧುರಂಧರರೆನಿಸಿಕೊಳ್ಳಬೇಕಾ ದರೆ, ಅವರು ಹೀಗೆ ಪೂರ್ಣ ವಿಚಾರ ಮಾಡಿಯೇ ಕಾರ್ಯ ಮಾಡ ಬೇಕಾಗುವದು. ಧುಡುಂ ಪ್ರವೇಶದಿಂದ ಹಿಮ್ಮೊಮ್ಮೆ ಭಯಂಕರ ಪ್ರಮಾದಗಳು ಘಟಿಸುತ್ತವೆ. ಪ್ರತಾಪವರ್ಮರು ಯಥಾಯೋಗ್ಯ ಮಾಡಿರುವರು." ಎಂದು ಸತ್ಯವರ್ಮನು ನುಡಿದು:— "ಮಹಾರಾ ಜರೇ, ವೀರಸೇನರು ನಮ್ಮ ಪಕ್ಷದವರಿರುವರೆಂದು ತಿಳಿಸಲೇನು?" ಎಂದು ಪುಲಿಕೇಶಿಯನ್ನು ವಿಚಾರಿಸಿದನು.

"ಏನೂ ಅಡ್ಡಿಯಿಲ್ಲ. ಅವರಿಂದಾಗಲಿ, ನಮ್ಮಿಂದಾಗಲಿ ನಿರೂಪವು ಬಂದೊಡನೆಯೆ ಹೊರಟು ಬರತಕ್ಕದ್ದೆಂದೂ ಸೈನ್ಯದ ವ್ಯವಸ್ಥೆಯು ಉತ್ತಮ ರೀತಿಯಿಂದಿರತಕ್ಕದ್ದೆಂದೂ ತಿಳಿಸಿರಿ."

"ನಾನು ನಿಮ್ಮ ಪಕ್ಷದವನೆಂಬ ನಂಬಿಗೆಯು ಪ್ರತಾಪವರ್ಮರಿ

ಗಾಗಬೇಕೆಂದು ಅವರ ಗುಪ್ತಚಾರನನ್ನು ಇಲ್ಲಿಯ ವರೆಗೆ ಇಟ್ಟು ಕೊಂಡೆನು. ಇನ್ನು ಈರ್ವರೂ ಪ್ರತಾಪವರ್ಮರ ಬಳಿಗೆ ಹೋಗಲಿ" ಎಂದು ವೀರಸೇನನು ಸತ್ಯವರ್ಮನನ್ನು ಕುರಿತು:—"ನಿಮ್ಮ ಹಸ್ತಾಕ್ಷರದ ಪತ್ರವನ್ನು ಸೇನಾಪತಿಗಳ ಕಡೆಗೆ ಕಳುಹಿಸಿರಿ. ಇಷ್ಟು ಎರಡು ದಿನಗಳಲ್ಲಿ ಇಲ್ಲಿಗೆ ಸೈನ್ಯಸಹಿತವಾಗಿ ಬರುವ ಪ್ರಸಂಗವೊದಗುವದೆಂಬದನ್ನಾದರೂ ತಿಳಿಸಿ ಬಿಡಿರಿ"

"ಏನು? ಇಷ್ಟು ಬೇಗನೆ ಯುದ್ಧದ ಗೊಂದಲವೇಳಬಹುದೇ?" ಎಂದು ವಿಜಯಾಂಬಿಕೆಯು ಉತ್ಕಂಠೆಯಿಂದ ಕೇಳಿದಳು.

"ಹೌದು. ಎರಡು ದಿನಗಳಲ್ಲೇ ಯುದ್ಧವು ಪ್ರಾರಂಭವಾಗಬಹುದು" ಎಂದು ವೀರಸೇನನು ನುಡಿದು:—"ಮಹಾರಾಜರೇ, ಯುದ್ಧದ ಪ್ರಸಂಗವೊದಗುವ ಪೂರ್ವದಲ್ಲಿ ನೀವೂ ವಿಜಯಾಂಬಿಕಾದೇವಿಯೂ ವಾತಾಪಿಪುರವನ್ನು ಬಿಡುವದು ಯುಕ್ತವು. ಯುದ್ಧದ ಇತ್ಯರ್ಥವನ್ನು ಕಂಡುಕೊಳ್ಳುವದಕ್ಕೆ ನಾವು ಸಿದ್ಧರಿರುವಾಗ, ಇಲ್ಲದ ತೊಂದರೆಯಲ್ಲಿ ನಿಮನ್ನು ಕೆಡಹುವದು ನನ್ನ ಮನಸ್ಸಿಗೆ ಬರಲೊಲ್ಲದು"

"ಏನು? ಕ್ಷತ್ರಿಯ ಶೀಲಕ್ಕನುಸಾರವಾಗಿ ಯುದ್ಧರಂಗದಲ್ಲಿ ವಿಕ್ರಮವನ್ನು ತೋರಿಸದೆ, ರಣಹೇಡಿಯಾಗಿ ಕಾಲ್ತೆಗೆಯುವದಕ್ಕೆ ನನಗೆ ಹೇಳುವಿರಾ?" ಎಂದು ಪುಲಿಕೇಶಿಯು ನುಡಿದು:-"ಸಂಗ್ರಾಮದಲ್ಲಿ ಕರ್ತವ್ಯಪ್ರಭಾವವನ್ನು ತೋರಿಸುವ ಸುಸಂಧಿಯನ್ನು ನಿಜವಾದ ಕ್ಷಾತ್ರವೀರನು ಎಂದೂ ವ್ಯರ್ಥವಾಗಿ ಹೋಗಗೊಡಲಾರನು."

"ಮಹಾರಾಜರೇ, ನಿಮ್ಮ ಧರ್ಮಯುದ್ಧದ ಮಾತು ಬೇರೆ. ಮಂಗಳೇಶನು ನಾನಾ ವಿಧದಿಂದ ನಿಮಗೆ ಅಪಾಯ ಮಾಡಲು ಯೋಚಿಸಿರುವನು. ಇಂಥ ಸಮಯದಲ್ಲಿ ನೀವು ಇಲ್ಲಿರುವದಕ್ಕೆ ಹಟತೊಡಬಾರದು. ನಿಮ್ಮ ಸೇವೆಯನ್ನು ನಿಷ್ಠೆಯಿಂದ ಮಾಡಿ ವಿಜಯಧ್ವಜವನ್ನು ನಿಲ್ಲಿಸುವೆವು."

"ವೀರಸೇನರ ಅಭಿಪ್ರಾಯವು ಯೋಗ್ಯವಿರುವದು"

"ಸತ್ಯವರ್ಮರೇ, ಹೀಗೇಕೆ ಹೇಳುವಿರಿ? ನಿಮ್ಮನ್ನು ಯುದ್ಧದಲ್ಲಿ ತೊಡಗಿಸಿ ನಾನು ಕರ್ತವ್ಯವಿಮುಖನಾಗಿ ಪಲಾಯನಮಾಡಲ್ಯಾ? ಛೆ! ಈ ಕಾರ್ಯವು ನನ್ನಿಂದ ಆಗದು ಹತೋ ವಾ ಪ್ರಾಪ್ಸ್ಯಸೀ ಸ್ವರ್ಗಂ ಜೀತ್ವಾ ವಾ ಭೋಕ್ಷ್ಯಸೇ ಮಹೀಮ್ ಎಂಬ ಗಿತೋಕ್ತಿಯನ್ನು ನಾನು ಚೆನ್ನಾಗಿ ಅರಿತವನಿರುವೆನು."

ಪುಲಿಕೇಶಿಯು ಈ ಮಾತುಗಳನ್ನು ಕೇಳಿ ಸತ್ಯವರ್ಮನ ಮನಸ್ಸು ತಳಮಳಗೊಂಡಿತು. ವೀರಸೇನನಂತೂ ಚಿಂತಾಕ್ರಾಂತನಾದನು. ವಾತಾಪಿಪುರವೇ ಸಂಗ್ರಾಮಭೂಮಿಯಾಗುವ ಪ್ರಸಂಗ ವೊದಗುವದಿದ್ದುದರಿಂದ, ಆಗ ರಾಜಧಾನಿಯಲ್ಲಿ ಪುಲಿಕೇಶಿಯ ಹಾಗು ವಿಜಯಾಂಬಿಕೆಯ ಜೀವಿತಗಳು ಹೇಗೆ ಸುರಕ್ಷಿತವಾಗುವವೆಂದು ಅವನು ಕುದಿಯ ತೊಡಗಿದನು.

---

## ಮಾತೃಹೃದಯ!!



ಭಾವೀ ಕ್ರಾಂತಿ ಸಮಯದಲ್ಲಿ ಪುಲಿಕೇಶಿಯು ರಾಜಧಾನಿಯಲ್ಲಿರಬಾರದೆಂದು ವೀರಸೇನನ ಇಚ್ಛೆಯಿತ್ತು. ಅವನು ಬಂಡಿನ ಪ್ರಸಂಗಕ್ಕೆ ವಾತಾಪಿಪುರದಲ್ಲಿದ್ದರೆ ಮಂಗಳೇಶನ ಪರಿವಾರದವರಿಂದ ಕೇಡುಂಟಾಗದಿರದೆಂದು ಸತ್ಯವರ್ಮನು ನಿಶ್ಚಯಿಸಿಕೊಂಡಿದ್ದನು ಪ್ರತಾಪವರ್ಮನ ಸೈನ್ಯವು ಸಹಾಯಕ್ಕೆ ಬಂದ ಹೊರತು ಶಿವವರ್ಮನ ಸೈನ್ಯವನ್ನು ವಿಮಲಸೇನನ ಸೈನ್ಯವು ಸೋಲಿಸಲಾರದೆಂದು ಅವನಿಗೆ ಮನದಟ್ಟಾದ್ದರಿಂದ, ಹಿಮ್ಮೆಲೆ ಬಂಡನ್ನು ಸಾರಲಿಕ್ಕೆ ಅಸಮರ್ಥನಾಗಿದ್ದನು. ಬಂಡಾಯದ ಪ್ರಸಂಗದಲ್ಲಿ ಪುಲಿಕೇಶಿಯನ್ನು ಹೇಗಾದರೂ ಮಾಡಿ ರಾಜಧಾನಿಯಿಂದ ಬೇರೆ ಕಡೆಗೆ ಸುರಕ್ಷಿತವಾದ ಸ್ಥಳಕ್ಕೆ ಕಳುಹಿಸಬೇಕೆಂದು ಅವನು ನಿರ್ಧರಿಸಿದ್ದನು

ಸಿಂಹಾಸನಾರೋಹಣ ಸಮಾರಂಭದ ವಿಜಯಾದಶಮಿಯ ಸುಮುಹೂರ್ತವು ನಾಲ್ಕೇ ದಿನ ಉಳಿದಿತ್ತು. ರಾಜಧಾನಿಯಲ್ಲಿ

ಎತ್ತ ನೋಡಿದತ್ತ ಕೋಲಾಹಲವೆದ್ದಿತ್ತು. ಒಂದು ಕಡೆಗೆ ಪುಲಿಕೇಶಿಯ ಪಕ್ಷದವರನ್ನು ಹಿಡಿಯುವ, ಹೊಡೆಯುವ, ಬಡಿಯುವ, ಕಾರಾಗೃಹದಲ್ಲಿ ಹಾಕುವ, ಶೂಲಕ್ಕೆ ಏರಿಸುವ ಗೊಂದಲವೆದ್ದಿದ್ದರೆ, ಮತ್ತೊಂದು ಕಡೆಗೆ ಮಂಗಳೇಶನ ಸಮಾರಂಭಕ್ಕೆ ಬರುವ ಜನರ ಆಗತ-ಸ್ವಾಗತದ ಗದ್ದಲವು ನಡೆದಿತ್ತು. ಒಂದೆಡೆಯಲ್ಲಿ ಮಂಗಳೇಶನ ಪರಿವಾರದ ಸಡಗರ-ಸಮಾರಂಭಗಳು ನಡೆದಿದ್ದರೆ, ಮತ್ತೊಂದು ಕಡೆಯಲ್ಲಿ ಪುಲಿಕೇಶಿಯ ಪರಿವಾರವು ಮೋರೆಯೊಣಗಿಸಿಕೊಂಡು ಕುದಿಯತೊಡಗಿತ್ತು! ಒಟ್ಟಿನ ಮೇಲೆ ವಾತಾಪಿಪುರದ ವಾತಾವರಣವು ಅತ್ಯಂತ ಪ್ರಕ್ಷುಬ್ಧವೂ, ಖೇದಜನಕವೂ ಆಗಿತ್ತೆಂದು ಹೇಳಬಹುದು.

ವೀರಸೇನನು ತಾನು ಪುಲಿಕೇಶಿಯ ಪಕ್ಷದವನೂ ಮಂಗಳೇಶನ ಕಡುತರನಾದ ವೈರಿಯೂ ಎಂಬುದರ ಗಂಧವು ಯಾರಿಗೂ ತಿಳಿಯದಂತೆ ಜಾಗ್ರತೆಯಿಂದ ನಡೆಯುತಲಿದ್ದನು. ಮಂಗಳೇಶನ ವಿರುದ್ಧವಾದ ವಾತಾವರಣವುಂಟಾಗುವದಕ್ಕಾಗಿ ಅವನು ಪುಲಿಕೇಶಿಯ ಪಕ್ಷದವರ ಮೇಲೆ ದಬ್ಬಾಳಿಕೆಯನ್ನು ಪ್ರಾರಂಭಿಸಿದ್ದನು. ಅವನು ಮಂಗಳೇಶನ ಆಜ್ಞೆಯೊಂದಲ್ಲದೆ ಭಾವೀ ಪಟ್ಟಮಹಿಷಿಯಾದ ವಿನಯಾಂಬಿಕೆಯ ಅಪ್ಪಣೆಯನ್ನಾದರೂ ಪಾಲಿಸಬೇಕಾಗುತ್ತಿತ್ತು. ಇತ್ತೀಚೆಗೆ ಮಂಗಳೇಶನು ವಿನಯಾಂಬಿಕೆಯ ಸೂತ್ರದ ಗೊಂಬೆಯಂತಾದ್ದರಿಂದ, ಅವಳ ಅಟ್ಟಹಾಸವು ಚನ್ನಾಗಿ ಬೆಳೆದಿತ್ತು. ಎಲ್ಲರ ವಿಚಾರಗಳ ವಿರುದ್ಧವಾಗಿ ತನ್ನ ಮತವನ್ನು ಪ್ರಸ್ಥಾಪಿಸುವಷ್ಟು ಶಕ್ತಿಯು ಅವಳಿಗೀಗ ಬಂದಿತ್ತು.

"ಚಂದ್ರಸೇನಾ, ನೀನು ಪುಲಿಕೇಶಿಗೆ ಬಹಳವಾಗಿ ಅಂಜುತ್ತಿರುವೆ. ಇನ್ನು ಮೇಲೆ ಇಂತಹ ಅಳ್ಳಬೆದರಿಕೆಯು ಕೆಲಸದ್ದಲ್ಲ. ನಮ್ಮ ಮಾರ್ಗವು ನಿರುಪಾಧಿತವಾಗಬೇಕಾದರೆ, ಪುಲಿಕೇಶಿಯನ್ನು ಅವನ ಪರಿವಾರ ಸಹಿತವಾಗಿ ನಿರ್ಮೂಲ ಮಾಡಲಿಕ್ಕೇ ಬೇಕು."

ಶಿವವರ್ಮನೂ, ವೀರಸೇನನೂ ಅರಮನೆಗೆ ಬಂದಿದ್ದರು.

ಮಂಗಳೇಶನು ಪ್ರಿಯಪತ್ನಿಯೊಂದಿಗೆ ಮಂಚದಲ್ಲಿ ಕುಳಿತಿದ್ದನು. ಪ್ರಸಂಗ ಬಂದಾಗ ಪುಲಿಕೇಶಿಯು ಪರಿವಾರದವರಿಂದ ತಮಗೇನಾದರೂ ತೊಂದರೆ ಘಟಿಸಬಹುದೆಂಬ ಅಂಜಿಕೆಯಿಂದ ವಿನಯಾಂಬಿಕೆಯು ಮೇಲಿನಂತೆ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು. ಆಗ ಶಿವವರ್ಮನು:—

"ಮಹಾರಾಜ್ಞಿಯವರೇ, ತಮ್ಮ ವಿಚಾರಗಳು ಯೋಗ್ಯವಾದವುಗಳಿರುವವು. ಪ್ರತಾಪವರ್ಮನು ಈಗ ಸೈನ್ಯವನ್ನು ಸಿದ್ಧಪಡಿಸುವ ಸಾಹಸ ನಡೆಯಿಸಿರುವದಾಗಿ ತಿಳಿಯುತ್ತದೆ. ನಾವು ಸದಯಾಂತಃಕರಣ ಭಾವದಿಂದ ದೊಡ್ಡ ಮನಸ್ಸು ಮಾಡಿದರೆ, ಅದರ ಪರ್ಯವಸಾನವು ಹಿತಾಗಲಾರದೆಂದು ನೀವು ಅನ್ನುವದು ನಿಜವಿರುವದು. ದಬ್ಬಾಳಿಕೆಯಿಂದ ಪುಲಿಕೇಶಿಯ ಪರಿವಾರವು ಕ್ಷೋಭೆಗೊಂಡಿರುವದು. ಅದಕ್ಕೆ ಈಗ ಹೊರಗಿನ ಬಲವು ದೊರೆಯಿತೆಂದರೆ, ನಮ್ಮ ಮನೋರಾಜ್ಯವು ನಾಶವಾಗದಿರದೆಂದು ನನಗೆ ಎನಿಸತೊಡಗಿದೆ. ನಾವು ಮಾಡುತ್ತಿರುವದು ಅನ್ಯಾಯವೆಂದು ಸಾಮ್ರಾಜ್ಯದೊಳಗಿನ ಬಹು ಜನರ ಗ್ರಹಿಕೆಯಾದಂತೆ ನನ್ನ ಅನುಭವಕ್ಕೆ ಬಂದಿದೆ. ರಾಜ್ಯಸೂತ್ರಗಳೆಲ್ಲ ನಮ್ಮ ಕೈಯೊಳಗಿರುವದರಿಂದಲೂ, ನಮ್ಮ ಸೇನಾಶಕ್ತಿಯು ಅಪರಿಮಿತವಿರುವದರಿಂದಲೂ ಯಾರಿಗೂ ಸೊಪ್ಪು ಹಾಕದಂತೆ ನಮ್ಮ ಸ್ಥಿತಿಯಿದ್ದರೂ, ಎಚ್ಚರಿಕೆಯಿಂದ ಕಾರ್ಯ ಮಾಡುವದರಲ್ಲಿ ಹೆಚ್ಚು-ಕಡಿಮೆ ಮಾಡಲಾಗದು. ಪುಲಿಕೇಶಿಯನ್ನೂ ಅವನ ಹಸ್ತಕರಾದ ಸತ್ಯವರ್ಮಾದಿಗಳನ್ನೂ ಕಾರಾಗೃಹದಲ್ಲಿ ಹಾಕಿದ ಹೊರತು ತಮ್ಮ ಮನೋಗತವು ನಿರ್ವಿಘ್ನವಾಗಿ ನೆರವೇರದೆಂದು ನನ್ನ ನಂಬಿಗೆಯಿದೆ."

"ನನ್ನ ವಿಚಾರವಾದರೂ ಹೀಗೆಯೇ ಇರುವದು. ನಾಳೆ ಮಧ್ಯರಾತ್ರಿಗೆ ಪುಲಿಕೇಶಿಯನ್ನು ಸೆರೆ ಹಿಡಿಯಬೇಕು. ಚಂದ್ರಸೇನಾ, ಈ ಕಾರ್ಯವನ್ನು ನೀನೇ ಮಾಡು. ಸತ್ಯವರ್ಮನನ್ನು ಶಿವವರ್ಮರು ಸೆರೆ ಹಿಡಿಯಲಿ. ನಯನಸೇನನು ರಾಜಧಾನಿಯ ಭದ್ರತೆಯನು

ಕಾಯಲಿ'' ಎಂದು ಮಂಗಳೇಶನು ನುಡಿಯಲು, ವಿನಯಾಂಬಿಕೆಯು ತಿರಸ್ಕಾರದಿಂದ:—

"ಬರೇ ಕೈಸೆರೆ ಹಿಡಿದಾಕ್ಷಣಕ್ಕೆ ಕೃತಕೃತ್ಯರಾದೆವೆಂದು ನೀವು ತಿಳಿಯುತ್ತಿರುವಿರೇನು? ಹಳ್ಳಿಯ ಪೌರುಷದ ಮಾತುಗಳನ್ನಾಡು ವಿರಿ! ಪುಲಿಕೇಶಿಯನ್ನು ಶೂಲಕ್ಕೇರಿಸಿದರೇನೇ ನನ್ನ ಮನಸ್ಸು ಶಾಂತ ವಾಗುವದು. ಅವನನ್ನು ಜೀವಂತವಾಗಿ ಉಳಿಸಿದರೆ ನಾನೆಂದೂ ಕೇಳುವವಳಲ್ಲ."

ವಿನಯಾಂಬಿಕೆಯು ಕಠೋರ ಹೃದಯುವನ್ನು ನೋಡಿ, ವೀರ ಸೇನನು ವಿಸ್ಮಿತನಾದನು; ಪರಕ್ಷಣದಲ್ಲಿ ಸಂತಾಪವು ಹುಟ್ಟಿತು; ಆದರೂ ಅವನು ಯಾವ ವಿಕಾರಗಳನ್ನೂ ಹೊರಪಡಿಸದೆ, ಇದ್ದರೆ ಇಂತಹ ಮಾತೃಹೃದಯುವಿರಬೇಕೆಂದು ಮನದಲ್ಲಿ ಅಂದುಕೊಂಡನು. ಆಗ ಅವನು:—

"ಮಹಾರಾಜ್ಞಿಯುವರೇ! ನಿಮ್ಮ ವಿಚಾರಗಳು ನಿಮ್ಮಿಷ್ಟಕ್ಕೆ ಸರಿಯಾಗಿ ಕಾಣುತ್ತಿರಬಹುದು ಪುಲಿಕೇಶಿಯೆಂದರೆ ಅವನೊಬ್ಬ ಯಃಕಶ್ಚಿತ ಮನುಷ್ಯನೆಂದು ತಿಳಿದು ಈ ರೀತಿಯಾಗಿ ಮಾತನಾಡು ವಿರಲ್ಲವೆ? ಅವನು ಚಾಲುಕ್ಯ ಸಮ್ರಾಟನೆಂಬದನ್ನು ನೀವು ಪೂರಾ ಮರೆತಂತೆ ಕಾಣುತ್ತದೆ ಅವನೀಗ ಪದಚ್ಯುತನಾಗಿ ಅಧಿಕಾರಹೀನ ನಾಗಿದ್ದರೂ, ಸಾಮ್ರಾಜ್ಯದ ಪ್ರಜೆಗಳಲ್ಲಿ ಬಹು ಸಂಖ್ಯಾಕರು ಪುಲಿ ಕೇಶಿಯ ಪಕ್ಷದವರಿರುವರೆಂಬ ಮಾತನ್ನು ಮರೆಯತಕ್ಕದ್ದಲ್ಲ ಅಧಿ ಕಾರಶಕ್ತಿಗೆ ಅಂಜಿ, ಬಹಿರಂಗಕ್ಕೆ ತಲೆಬಾಗಿ ನಡೆಯುತ್ತಿರುವ ಜನ ರಲ್ಲಿ ಎಷ್ಟೋ ಜನರು ಮನಸಾ ನಮ್ಮ ವೈರವನ್ನು ಮಾಡುತ್ತಿರು ವರು. ಇಂತಹ ಪ್ರಸಂಗದಲ್ಲಿ ಸಾರ್ವಭೌಮನ ಕೊಲೆಯಾದರೆ, ಜನ ತೆಯು ಕ್ಷೋಭಗೊಂಡು ನಮ್ಮ ಕಾರ್ಯಕ್ಕೆ ಗಂಡಾಂತರವೊದಗು ವದಲ್ಲದೆ, ಸರ್ವತೋಪರಿ ನಾಶವೊದಗುವದೆಂದು ಹೇಳದಿರಲಾರೆನು. ಸಿಂಹಾಸನಾರೋಹಣದ ಮಂಗಲದಾಯಕ ಪ್ರಸಂಗದಲ್ಲಿ ಸಮ್ರಾ ಟನ ಕೊಲೆಯು ಕಲಂಕವನ್ನು ಹೊಂದಬಾರದೆಂದು ನನ್ನ ವಿನಂತಿ

ಯುಂಟು ''

''ಚಂದ್ರಸೇನಾ, ನೀನು ಪುಲಿಕೇಶಿಯ ಪಕ್ಷವನ್ನು ವಹಿಸಿ ದಂತೆ ತೋರುತ್ತದೆ. ಹಾಗಿಲ್ಲದಿದ್ದರೆ ಅವನ ವಿಷಯಕ್ಕೆ ಈ ಪ್ರಕಾ ರದ ಸಹಾನುಭೂತಿಯು ವ್ಯಕ್ತವಾಗುತ್ತಿರಲಿಲ್ಲ. ಅವನು ಸಮ್ರಾ ಟನೆಂದು ಯಾರು ಹೇಳುವರು? ನೀನು ಅಂತರಂಗದಲ್ಲಿ ಅವನ ಪಕ್ಷ ವನ್ನು ವಹಿಸಿರುವದರಿಂದಲೇ ಅವನನ್ನು ಸಮ್ರಾಟನೆಂದು ಸಂಬೋ ಧಿಸುತ್ತಲಿರುವೆ.''

''ಏನು ಮಹಾರಾಣಿಯವರೇ, ನಾನು ಅಂತರಂಗದಲ್ಲಿ ಅವನ ಪಕ್ಷವನ್ನು ವಹಿಸಿರುವೆನೆಂದು ಆರೋಪಿಸುವಿರಾ! ಸ್ವಾಮಿನಿಷ್ಠೆ ಯಿಂದ ನಡೆದದ್ದಕ್ಕೆ ಚನ್ನಾಗಿ ಪ್ರತಿಫಲವು ದೊರೆಯಿತು! ನಿಮಗೆ ಹಿತವಾಗುವದಕ್ಕಾಗಿ, ನಿಮ್ಮ ವಿಷಯಕ್ಕೆ ಸಹಾನುಭೂತಿಯುಳ್ಳ ವನೂ, ನಿಷ್ಠೆಯುಳ್ಳವನೂ ಆದ ನಾನು ಯೋಗ್ಯವಾದ ಅಭಿಪ್ರಾ ಯವನ್ನು ವ್ಯಕ್ತಪಡಿಸಿದರೆ ಹೀಗೆ ದೋಷವೇಯುವಿರಲ್ಲವೆ? ಆಗಲಿ, ನಿಮ್ಮ ಮನಸ್ಸಿನಲ್ಲಿದ್ದಂತೆ ಮಾಡಿರಿ ನಾನಂತೂ ಮೊದಲಿನಿಂದ ಹೇಗೆ ನಿಷ್ಠೆಯಿಂದಿರುವೆನೋ ಹಾಗೆಯೇ ಈಗಲಾದರೂ ಇರುವೆನು. ಅದರಲ್ಲಿ ತಿಲಾಂಶವಾದರೂ ಹೆಚ್ಚು-ಕಡಿಮೆಯಾಗಿದ್ದರೆ ದುರ್ಗತಿ ಯೊದಗಲಿ! ನೀವು ಏನೇನೋ ಕಲ್ಪಿಸಿ ಮನಬಂದಂತೆ ಮಾಡಬೇ ಕೆನ್ನುವಿರಿ. ಅದಕ್ಕೆ ನಾನೇಕೆ ಅಡ್ಡಾಗಲಿ? ಸಾಗಲಿ! ನಿಮ್ಮ ಹಗಲು ವಾಡಿಯ ಕಾರ್ಯಭಾರವು ಸಾಗಲಿ! ಸತ್ಯಮೇವ ಜಯತೆ!''

ಚಂದ್ರಸೇನನ ಮಾತುಗಳನ್ನು ಕೇಳಿ ತನ್ನಿಂದ ಅನುಚಿತವು ಘಟಿಸಿತೆಂದು ವಿನಯಾಂಬಿಕೆಯು ತಿಳಿದಳು ತನ್ನ ಕಟುಭಾಷಣ ದಿಂದ ಅವನ ಮನಸ್ಸು ನೊಂದಿತೆಂದು ಅವಳು ಭಾವಿಸಿ, ಅವನಿಗೆ ಸಮಾಧಾನವಾಗುವದಕ್ಕಾಗಿ:—''ಚಂದ್ರಸೇನಾ, ರಾಜಕಾರಣದಲ್ಲಿ ಪುರುಷರಂತೆ ಸ್ತ್ರೀಯರು ಪ್ರಗತಿಯನ್ನು ಹೊಂದುವದು ದುಸ್ತರವು. ನಾನು ನನ್ನ ಯೋಗ್ಯತೆಗನುಸಾರವಾಗಿ ಮಾತನಾಡಿದೆನು ಅದನ್ನು ನೀನು ಹಚ್ಚಿಕೊಳ್ಳುವ ಕಾರಣವಿಲ್ಲ. ಮಂತ್ರಿಯಾದ ನಿನ್ನ ತಂತ್ರ

ದಂತೆ ನಡೆಯುವದರಿಂದ ನಮ್ಮ ಹಿತವು ಸಾಧಿಸುವದೇ ಹೊರತು, ನಿನ್ನನ್ನು ಬಿಟ್ಟು ಯಾವ ಕಾರ್ಯವು ಸಾಧ್ಯವಾದೀತು?''

"ಮಹಾರಾಣಿಯವರೇ, ಕೇವಲ ನಿಮ್ಮ ಹಿತಕ್ಕಾಗಿ ನಾನು ದೇಹವನ್ನು ಸವೆಯಿಸುತ್ತಿರಲು, ಈ ವಿಧವಾಗಿ ದೋಷವಿಡಬಹುದೇ? ನಾನು ಅತ್ಯಂತ ನಿಷ್ಠೆಯಿಂದ ನಡೆದುದರಿಂದಲೆ ಸಾಮಾನ್ಯತರಗತಿಯ ಸೇವಾವೃತ್ತಿಯಿಂದ ಮಂತ್ರಿಪದದ ವರೆಗೆ ಯೋಗ್ಯತೆ ಹೊಂದಿದೆನು ಪುಲಿಕೇಶಿಯ ಕೊಲೆಯ ಪರಿಣಾಮವು ಅತ್ಯಂತ ಭಯಂಕರವಿರುವದೆಂದು ನನಗೆ ತೋರಿದ್ದರಿಂದಲೇ ನಾನು ನಿಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿ ಮಾತನಾಡಿದೆನು''

"ಚಂದ್ರಸೇನಾ, ಅವನ ಕೊಲೆ ಮಾಡುವದು ಬೇಡವೇ ಬೇಡ. ಅವನನ್ನೂ, ಸತ್ಯವರ್ಮನನ್ನೂ ಕಾರಾಗೃಹದಲ್ಲಿಡುವದಕ್ಕೆ ಅಡ್ಡಿಯೇನು? ಅವರು ಹೊರಗಿರುವದರಿಂದ ನಮ್ಮ ಕಾರ್ಯಕ್ಕೆ ಕಂಟಕಪ್ರದರಾಗಲಿಕ್ಕಿಲ್ಲವೆ?'' ಎಂದು ಮಂಗಳೇಶನು ನುಡಿಯಲು, ಶಿವವರ್ಮನು:—

"ಈ ಮಾತಿನಲ್ಲಿ ಸಂದೇಹವಿಲ್ಲ. ಅವರನ್ನು ಸೆರೆಯಲ್ಲಿಡದಿದ್ದರೆ ಸಮಾರಂಭಕ್ಕೆ ವಿಘ್ನಕಾರಿಗಳಾಗುವರೆಂಬ ಮಾತಿನಲ್ಲಿ ತಿಲಾಂಶವಾದರೂ ಸಂಶಯವಿಲ್ಲ'' ಎಂದ ಕೂಡಲೆ, ವಿನಯಾಂಬಿಕೆಯು—

"ವಿಜಯಾಂಬಿಕೆಯನ್ನು ಸಹ ಕಾರಾಗೃಹದಲ್ಲಿಡಬೇಕು. ಹಿಳ್ಳೀ ಕಾರಸ್ಥಾನಿಯಿರುವದರಿಂದ ಈ ವೇಳೆಯಲ್ಲ ಅವಳನ್ನು ಮರೆಯುವ ಕಾರಣವಿಲ್ಲ.''

"ಚಂದ್ರಸೇನಾ, ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?'' ಎಂದು ಮಂಗಳೇಶನು ಆತುರತೆಯಿಂದ ಕೇಳಿದನು.

ಪುಲಿಕೇಶಿ-ವಿಜಯಾಂಬಿಕೆಯರನ್ನೂ, ಸತ್ಯವರ್ಮರನ್ನೂ ಕಾರಾಗೃಹದಲ್ಲಿಡುವದಕ್ಕೆ ಮಂಗಳೇಶನೂ, ವಿನಯಾಂಬಿಕೆಯೂ ಅತ್ಯಂತ ಆತುರಪಟ್ಟಿರುವರೆಂದು ಚಂದ್ರಸೇನನಿಗೆ ತಿಳಿಯಿತು. ಈ ಮಾತಿಗೆ ವಿರೋಧವನ್ನು ತೋರಿಸಿದರೆ ತನ್ನ ಮನಸ್ಸಿನ ನಿಜಸ್ಥಿತಿಯು

ಬೈಲಿಗೆ ಬಂದೀತೆಂದು ಅವನು ಬೆದರಿನು. ಪುಲಿಕೇಶಿಗೆ ಇವರ ವಿಚಾರಗಳನ್ನು ತಿಳಿಸಿ, ವಾತಾಪಿಪುರದಿಂದ ಅವನನ್ನು ಹೊರದೂಡಲಿಕ್ಕೆ ಇದೊಂದು ಸಾಧನವು ದೊರೆಯಿತೆಂದು ಅವನಿಗೆ ಒಂದು ವಿಧವಾಗಿ ಆನಂದವಾಯಿತು. ಆಗ ಅವನು:—

"ಮಹಾರಾಜರೆ, ನಿಮ್ಮ ಮತವೇ ನನ್ನ ಮತವು. ಸಮಂಜಸ ವಿಚಾರಗಳನ್ನು ವಿರೋಧಿಸುವದಕ್ಕೆ ನಾನೇನು ಅಂತಹ ಅವಿಚಾರಿಯೇ? ಪುಲಿಕೇಶಿಯನ್ನಷ್ಟೇ ಏಕೆ, ಅವನ ಪರಿವಾರವನ್ನೆಲ್ಲ ಇಂದೇ ಕಾರಾಗೃಹದಲ್ಲಿ ತುಂಬಿರಿ. ಇಡಿಯ ವಾತಾಪಿಪುರ ರಾಜಧಾನಿಯನ್ನೇ ಕಾರಾಗೃಹ ಮಾಡೋಣ. ಇನ್ನು ಅನುಮಾನವೇ ಬೇಡ" ಎಂದು ಚಂದ್ರಸೇನನು ನುಡಿಯಲು, ಎಲ್ಲರಿಗೂ ಆನಂದವಾಯಿತು. ವಿನಯಾಂಬಿಕೆಯಂತೂ ಹರ್ಷೋನ್ಮಾದದಿಂದ ಎಚ್ಚರದಪ್ಪಿದಳು ಆ ಉನ್ಮಾದದ ಭರದಲ್ಲಿ ಅವಳು:—

"ಚಂದ್ರಸೇನಾ. ಆ ನೀಚ ಪುಲಿಕೇಶಿಯನ್ನೂ. ನ್ಯಾಯಾಳಿಯಾದ ವಿಜಯಾಂಬಿಕೆಯನ್ನೂ ಶೂಲಕ್ಕೇರಿಸಿದರೇನೇ ನನ್ನ ಮನಸ್ಸು ಸಮಾಧಾನ ಹೊಂದುವದು. ಯಾರಿಗೆ ಕ್ಷಮೆ ದೊರೆತರೂ ಪುಲಿಕೇಶಿಯನ್ನು ಕ್ಷಮಿಸತಕ್ಕದ್ದಲ್ಲ. ಅವನು ಜೀವಂತವಾಗಿ ಉಳಿದರೆ, ಒಂದಿಲ್ಲೊಂದು ದಿನ ನಮಗೆ ಮೃತ್ಯುರೂಪಿಯಾಗಿ ಪರಿಣಮಿಸಬಹುದು ಆದ್ದರಿಂದ ಅವನಿಗೆ ಶಕ್ಯವಿದ್ದಷ್ಟು ಬೇಗನೆ ದೇಹಾಂತಶಾಸನವನ್ನು ವಿಧಿಸತಕ್ಕದ್ದು. ಅವನ ಶಿರವು ದೇಹದಿಂದ ಕಡೆಗೆ ಬಿದ್ದದ್ದನ್ನು ನೋಡಿದರೆ, ನನ್ನ ನೇತ್ರಗಳ ಸಾಫಲ್ಯವಾಗುತ್ತದೆ; ಮನಸ್ಸು ತೃಪ್ತಿಯಾಗುತ್ತದೆ."

"ಧನ್ಯ! ಧನ್ಯ! ನಿನ್ನ ಮಾತೃಹೃದಯದ ಧನ್ಯವಾದನೆಯನ್ನು ಎಷ್ಟು ಬಗೆಯಿಂದ ಮಾಡಿದರೂ ಕಡಿಮೆಯೇ ಇದೆ!" ಎಂದು ಚಂದ್ರಸೇನನು ಮನದಲ್ಲಿ ಅಂದುಕೊಂಡು:—

"ಮಹಾರಾಜ್ಞಿಯವರೇ, ಯಾವದೊಂದು ಬಗೆಯಿಂದ ನಿಮ್ಮ ರಕ್ತಪಿಪಾಸೀ ಹೃದಯವನ್ನು ತೃಪ್ತಿಬಡಿಸುವೆನು" ಎಂದು ನುಡಿಯು

ವಷ್ಟರಲ್ಲಿ ಸೇವಕನೋರ್ವನು ಅಲ್ಲಿಗೆ ಬಂದು ಅಭಿವಂದಿಸಿ:—

"ಮಹಾರಾಜರೆ, ಸಿಂಹಾಸನಾರೋಹಣ ಸಮಾರಂಭಕ್ಕೆ ಕದಂಬರಾಜರು ಆಗಮಿಸಿರುವರು. ಅವರು ನಗರದ ಸಮೀಪಕ್ಕೆ ಬಂದಿರುವದಾಗಿ ತಿಳಿಯುತ್ತದೆ."

"ಚಂದ್ರಸೇನ-ಶಿವವರ್ಮರೇ, ನಡೆಯಿರಿ. ಕದಂಬಾಧಿಪನ ಸ್ವಾಗತವನ್ನು ಉತ್ತಮ ಪ್ರಕಾರದಿಂದ ಮಾಡೋಣ" ಎಂದು ಮಂಗಳೇಶನು ನುಡಿದು ಅರಮನೆಯಿಂದ ಹೊರಟನು. ಚಂದ್ರಸೇನ-ಶಿವವರ್ಮರು ಅವನ ಬೆನ್ನ ಹಿಂದೆ ನಡೆದರು.

---

## ವಿಲಕ್ಷಣ ಹಂಚಿಕೆ.

ಮಧ್ಯರಾತ್ರಿಯ ಸಮಯವಾಗಿತ್ತು. ಎಲ್ಲೆಡೆಯಲ್ಲಿ ಅಂಧಕಾರದ ಸಾಮ್ರಾಜ್ಯವು ಪಸರಿಸಿತ್ತು. ಆಕಾಶದ ತುಂಬ ಮೋಡವು ಮುಸುಕಿದ್ದರಿಂದ ನಕ್ಷತ್ರಪ್ರಕಾಶವು ಸಹ ಇಲ್ಲದಂತಾಗಿ ಆ ಅಂಧಕಾರಕ್ಕೆ ಮತ್ತಿಷ್ಟು ಭೀಷಣಸ್ವರೂಪವು ಪ್ರಾಪ್ತವಾಗಿತ್ತು. ವಾತಾಪಿಪುರದಲ್ಲಿಯ ಜನರೆಲ್ಲ ನಿದ್ರಾವಶರಾದದ್ದರಿಂದ ರಾಜಧಾನಿಯಲ್ಲಿ ಎತ್ತ ನೋಡಿದತ್ತ ಸ್ತಬ್ಧತೆಯು ನೆಲೆಗೊಂಡಿತ್ತು. ಇಂತಹ ಸಮಯದಲ್ಲಿ ವೀರಸೇನನು ತನ್ನ ಮನೆಯಿಂರ ಹೊರಬಿದ್ದು ಸತ್ಯವರ್ಮನ ನಿವಾಸಕ್ಕೆ ತೆರಳಿದ್ದನು; ಅವನು ಹಳ್ಳಿಯ ಆತುರದ ಕೆಲಸಕ್ಕಾಗಿ ಹೊರಟದ್ದರಿಂದ ಅತ್ತಿತ್ತ ನೋಡದೆ, ಎಡವುತ್ತ-ಮುಗ್ಗುತ್ತ ಹಳ್ಳೀ ರಭಸದಿಂದ ಸಾಗಿದ್ದನು.

ಸ್ವಾಮಿಕಾರ್ಯಕ್ಕಾಗಿ ಆತ್ಮಬಲಿಯನ್ನು ಅರ್ಪಿಸಲು ಸಿದ್ಧನಾಗಿದ್ದ ಸ್ವಾಮಿನಿಷ್ಠನಾದ ಸತ್ಯವರ್ಮನು ಸೌಧಾಗ್ರದಲ್ಲಿ ವಿಚಾರಮಗ್ನನಾಗಿ ಕುಳಿತಿದ್ದನು. ಸ್ವಾಮಿಯ ಹಿತಚಿಂತನೆಯು ಹೊರತು ಅವನಿಗೀಗ ಅನ್ಯವಿಚಾರಗಳು ಹೇಗೆ ಬರಬೇಕು? ಅವನು ಆಹಾರ-ನಿದ್ರೆಗಳ ಪರಿವೆಯಿಲ್ಲದೆ ತನ್ನ ಒಡೆಯನ ಭಾಗ್ಯೋದಯವು ಹೇಗಾ

ದೀತೆಂದು ಚಿಂತಿಸುತ್ತಲಿದ್ದನು. ಆಗ ವೀರಸೇನನು ಅಲ್ಲಿಗೆ ಬಂದ ಕೂಡಲೆ ಅವನಿಗೆ ಪರಮಾಶ್ಚರ್ಯವಾಯಿತು. ವೀರಸೇನನು ಅವನ ಕಿವಿಯಲ್ಲಿ ಏನೋ ಹೇಳಲು, ಅವನು ಚಟ್ಟನೆ ಆಸನದಿಂದೆದ್ದನು. ಈರ್ವರು ಅಲ್ಲಿಂದ ಹೊರಟು ಪುಲಿಕೇಶಿಯ ಮಂದಿರವನ್ನು ತಲು ಪಿದರು.

ಸತ್ಯವರ್ಮನು ಎಲ್ಲರ ಗುರುತಿನವನಿದ್ದುದರಿಂದ, ಕಾವಲು ಗಾರರಿಂದ ಆತಂಕವುಂಟಾಗಲಿಲ್ಲ. ಅವರು ಒಳಗೆ ಪ್ರವೇಶಿಸಿ ದರು. ಮಧ್ಯರಾತ್ರಿಯ ಸಮಯದಲ್ಲಿ ಸತ್ಯವರ್ಮ-ವೀರಸೇನರ ಆಗಮನವಾದದ್ದನ್ನು ನೋಡಿ, ಪುಲಿಕೇಶಿಯು ಸೋಜಿಗಗೊಂಡನು. ಆಗ ಅವನು ಉತ್ಕಂಠೆಯಿಂದ:—

"ಇದೇನು? ಇಂತಹ ರಾತ್ರಿಯಲ್ಲಿ ಬರೋಣವಾಯಿತು?"

"ಮಹಾರಾಜರೆ, ನಾಳೆ ಮಧ್ಯರಾತ್ರಿಯ ಸಮಯಕ್ಕೆ ತಮ್ಮ ನ್ನು ಹಾಗು ವಿಜಯಾಂಬಿಕಾದೇವಿಯವರನ್ನು ಮಂಗಳೇಶನು ಸೆರೆ ಹಿಡಿಯಬೇಕೆಂದು ಯೋಚಿಸಿರುವನು. ನಾನಾದರೂ ಕಾರಾಗೃಹ ವನ್ನು ಸೇರುವ ಪ್ರಸಂಗವಿರುವದು ಈ ಸಂಗತಿಯನ್ನು ವೀರ ಸೇನರು ಈಗ ನನಗೆ ತಿಳಿಸಿದ್ದರಿಂದ ಈರ್ವರೂ ಆತುರದಿಂದ ಇತ್ತ ಬಂದೆವು" ಎಂದು ಸತ್ಯವರ್ಮನು ನುಡಿಯಲು ವೀರಸೇನನು:— "ನಿಮ್ಮನ್ನು ಸೆರೆ ಹಿಡಿಯುವದಕ್ಕೆ ನನಗೆ ಆಜ್ಞಾಪಿಸಿರುವನು. ಸತ್ಯ ವರ್ಮರನ್ನು ಸೆರೆ ಹಿಡಿಯುವದಕ್ಕೆ ಶಿವವರ್ಮನಿಗೆ ಅಜ್ಞೆಯಾಗಿದೆ."

"ಮುಂದೆ ಏನು ಮಾಡಬೇಕೆನ್ನುವಿರಿ?" ಎಂದು ಪುಲಿಕೇಶಿ ಯು ಉತ್ಕಂಠೆಯಿಂದ ಕೇಳಿದನು. "ನೀವು ವಿಜಯಾಂಬಿಕಾದೇವಿ ಯವರೊಡನೆ ಈಗಲೆ ರಾಜಧಾನಿಯನ್ನು ಬಿಟ್ಟು ಸುರಕ್ಷಿತ ಸ್ಥಳಕ್ಕೆ ತೆರಳಬೇಕು. ಅನಂತರದಲ್ಲಿ ನಮ್ಮ ಮಾರ್ಗವನ್ನು ನಾವು ಕಾಣು ವೆವು. ಬಂಡಾಯದ ತರುವಾಯ ಎಲ್ಲ ಕಡೆಯಲ್ಲಿ ಶಾಂತತೆಯು ಸ್ಥಾಪಿತವಾಗುವ ವರೆಗೆ ನೀವು ಅಜ್ಞಾತವಾಸವನ್ನು ಅನು ಭವಿಸಬೇಕು."

"ವೀರಸೇನರೇ, ನನ್ನ ಶರೀರದ ಪ್ರತಿಯೊಂದು ರಕ್ತದ ಕಣಗಳಲ್ಲಿ ಕ್ಷಾತ್ರವೃತ್ತಿಯ ವೀರಾವೇಶವು ವಾಸಿಸುತ್ತಿರಲು, ಕೈಲಾಗದವನಂತೆ ಪಲಾಯನಸೂಕ್ತವನ್ನು ಪಠಿಸಲು ಹೇಳುವಿರಲ್ಲವೇ? ಸೈನ್ಯಸಹಿತವಾಗಿ ನಾಳೆ ಸೂರ್ಯೋದಯದೊಳಗಾಗಿ ಬರಬೇಕೆಂದು ಪ್ರತಾಪವರ್ಮರಿಗೆ ತಿಳಿಸುವೆನು; ನಯನಸೇನರೂ ನೀವೂ ಸೈನ್ಯಸಹಿತವಾಗಿ ನಮ್ಮ ನೆರವಿಗೆ ಇದ್ದೇ ಇರುವಿರಿ ಹೀಗಿದ್ದ ಮೇಲೆ, ಅಷ್ಟೊಂದು ಅಂಜುವ ಕಾರಣವಿಲ್ಲ."

"ಮಹಾರಾಜರೇ, ನಿಮ್ಮ ವಿಚಾರಗಳು ಇನ್ನೂ ಅಷ್ಟೊಂದು ಪರಿಪಕ್ವವಾಗಿರುವದಿಲ್ಲವೆನ್ನಬೇಕಾಗಿದೆ. ವೈರಿಯು ಪ್ರಬಲನಿರುವದರಿಂದ ಪ್ರಸಂಗವಿಶೇಷದಲ್ಲಿ ನಿಮಗೆ ಅಪಾಯವೊದಗೀತೆಂದು ಹೀಗೆ ಹೇಳುತ್ತಿರುವೆನು. ಮಂಗಳೇಶನೊಬ್ಬನನ್ನು ಕೊಲೆ ಮಾಡುವದು ಅಸಾಧ್ಯವಿರದಿದ್ದರೂ ಅವನ ಪರಿವಾರದ ಪಾರಪತ್ಯವು ಕಷ್ಟಸಾಧ್ಯವಿರುವದು. ಅದನ್ನು ಒಳ್ಳೆಯ ಹಂಚಿಕೆಯಿಂದ ಮಾಡಬೇಕಾಗಿದೆ. ನೀವು ಇಲ್ಲಿದ್ದರೆ ನಿಮ್ಮ ರಕ್ಷಣೆಯ ಚಿಂತೆಯೊಂದು ನಮ್ಮನ್ನು ಬಾಧಿಸತೊಡಗುವದು. ನನ್ನ ಮನಸ್ಸಿನಂತೆ ಎಲ್ಲ ಕೆಲಸಗಳು ನೆರವೇರಬೇಕಾದರೆ, ನೀವು ಇಲ್ಲಿಂದ ಹೊರಡಲೇಬೇಕು. ಕುಲಾಂಗಾರನಾದ ಮಂಗಳೇಶನೂ, ರಾಕ್ಷಸೀ ಮಹತ್ವಾಕಾಂಕ್ಷೆಯುಳ್ಳವಳಾದ ವಿನಯಾಂಬಿಕೆಯೂ ನಿಮ್ಮನ್ನು ನಾಶಗೊಳಿಸಬೇಕೆಂದು ಯೋಚಿಸಿರುವದಾಗಿ ತಿಳಿಯುತ್ತದೆ ಅಂತೆಯೇ ಅಸಹಾಯಸ್ಥಿತಿಯವರಾದ ನಿಮಗೆ ಪುಂತ್ಯಾಗ ಮಾಡಬೇಕೆಂದು ಬೇಡಿಕೊಳ್ಳುವೆನು. ರಾಜಧಾನಿಯು ರಣಭೂಮಿಯಾಗುವ ಪ್ರಸಂಗದಲ್ಲಿ ನೀಚ ಜನರಿಂದ ನಿಮ್ಮ ಜೀವಿತಕ್ಕೆ ಬಾಧೆಯುಂಟಾಗಬಾರದೆಂದು ನನ್ನ ಇಚ್ಛೆಯುಂಟು. ಮಹಾರಾಜರೇ, ಈ ಪ್ರಸಂಗದಲ್ಲಿ ದುರಾಗ್ರಹ ಹಿಡಿಯಬೇಡಿರಿ." ವೀರಸೇನನು ಹೀಗೆ ನುಡಿದ ಕೂಡಲೆ ಪುಲಿಕೇಶಿಯು ವಿಚಾರಮಗ್ನನಾದನು. ವೀರೋಚಿತವಾದ ಯುದ್ಧಕಾರ್ಯ ಮಾಡದೆ ರಣಕ್ಕಂಜಿ ಓಡಿ ಹೋಗುವದು ಅವನ ಅಭಿಮಾ

ನಕ್ಕ ಕುಂದೆನಿಸಿತು. ಆಗ ಸತ್ಯವರ್ಮನು—

"ನೀವು ಈ ವಿಷಯದಲ್ಲಿ ವೀರಸೇನರ ಮಾತಿನಂತೆ ನಡೆಯು ವದು ಹಿತಕರವೆನಿಸುವದು. ನಿಮ್ಮ ಕಾರ್ಯವನ್ನು ಕೊನೆಗಾಣಿ ಸುವದಕ್ಕೆ ನಿಮ್ಮ ಸೇವಕರಾದ ನಾವು ಸಿದ್ಧರಿರುತ್ತಿರಲು, ಯಾವ ಬಗೆಯ ವಿಚಾರಕ್ಕೂ ಆಸ್ಪದ ಕೊಡಬೇಡಿರಿ"

"ಸತ್ಯವರ್ಮರೇ, ನನಗೆ ನೀವು ಈ ಆಲೋಚನೆಯನ್ನು ಹೇಳ ಬೇಡಿರಿ. ಸಮರಭೂಮಿಯಲ್ಲಿ ಶೌರ್ಯವನ್ನು ಪ್ರಕಟಗೊಳಿಸುವ ಸಂಧಿಯನ್ನು ವ್ಯರ್ಥ ಹೋಗಗೊಡಲಾರೆನು"

"ಚಂಚಲತರವಾದ ತಾರುಣ್ಯವೃತ್ತಿಯ ಪರಿಣಾಮವಿದು! ನಾವು ಏನು ಹೇಳಿದರೂ ಮಹಾರಾಜರ ಚಿತ್ತಕ್ಕೆ ಸರಿ ಕಾಣುವದಿಲ್ಲ. ಹೀಗಾದರೆ ಮನಸ್ಸಿನಂತೆ ಕಾರ್ಯವಾಗುವದು ಕಠಿಣವಿರುವದು" ಎಂದು ವೀರಸೇನನು ನುಡಿದು, ವಿಚಾರ ಮನಸ್ಕನಾಗಿ ಸ್ವಸ್ಥ ಕುಳಿ ತನು. ವಿಜಯಾಂಬಿಕೆಯು ಅವರ ಸಂಭಾಷಣವನ್ನು ಕೇಳುತ್ತ ಇಷ್ಟು ಹೊತ್ತಿನ ವರೆಗೆ ತಟಸ್ಥವೃತ್ತಿಯಿಂದ ಕುಳಿತಿದ್ದಳು. ಇನ್ನು ಪತಿಗೆ ಬುದ್ಧಿಯನ್ನು ಹೇಳದಿದ್ದರೆ, ಗತ್ಯಂತರವಿಲ್ಲೆಂದು ಅವಳಿಗೆ ತಿಳಿಯಿತು. ಅವಳು ಪುಲಿಕೇಶಿಯನ್ನು ಕುರಿತು ವಿನಯದಿಂದ: —

"ಮಹಾರಾಜರೇ, ನನ್ನ ಅಣ್ಣನಾದ ವೀರಸೇನನು ರಾಜಕಾ ರಣದಲ್ಲಿ ಅದ್ವಿತೀಯ ಧೋರಣವುಳ್ಳವನು. ಅವನ ಹೇಳಿಕೆಯಂತೆ ನಡೆಯುವದಕ್ಕೆ ತಾವು ಹಿಂಜರಿಯಲಾಗದು. ಹೆದರಿದಂತೆ ನಟಿಸಿ ಯಾಗಲಿ, ಪಲಾಯನ ಮಾಡಿಯಾಗಲಿ ಜಯ ಸಂಪಾದಿಸುವದೊಂದು ಸಂಗ್ರಾಮ ವಿದ್ಯೆಯ ನೈಪುಣ್ಯತನದ ಲಕ್ಷಣವೆಂದು ಹೇಳಲು ಅಡ್ಡಿ ಯಿಲ್ಲ. ಧರ್ಮಯುದ್ಧ ಮಾಡುವವರನ್ನು ಧರ್ಮದಿಂದ, ಕಪಟಿ ಗಳನ್ನು ಕಪಟದಿಂದ ಜಯಿಸುವದು ಯೋಗ್ಯವಿರುವದು. ಯಾವ ವಿಧದಿಂದಲಾದರೂ ವಿಜಯಲಕ್ಷ್ಮಿಯನ್ನು ವಶ ಮಾಡಿಕೊಡುವದು ವೀರಸೇನ ಅಣ್ಣನವ್ನು ಕೂಡಿರುವದೆಂದ ಮೇಲೆ, ಈ ವಿಷಯದಲ್ಲಿ ನೀವು ಕೊರಗಲಾಗದು."

ವಿಜಯಾಂಬಿಕೆಯ ಮಾತುಗಳನ್ನು ಕೇಳಿ, ಪುಲಿಕೇಶಿಯು ವೀರಸೇನನ ಹೇಳಿಕೆಯಂತೆ ನಡೆಯಲೊಪ್ಪಿದನು. ವೀರಸೇನನು ಯಾವದೋ ಒಂದು ಗಹನವಾದ ವಿಚಾರದಲ್ಲಿ ಮುಳುಗಿದ್ದನು. ಅವನ ಚಿತ್ತವು ವಿಜಯಾಂಬಿಕೆಯ ಮಾತಿನ ಕಡೆಗಿರಲಿಲ್ಲ. ಆಗ ಪುಲಿಕೇಶಿಯು:—

"ವೀರಸೇನರೇ, ನೀವು ಹೇಗೆ ಹೇಳುವಿರೋ, ಅದರಂತೆ ನಡೆಯುವದಕ್ಕೆ ಸಿದ್ಧನಿರುವೆನು. ಹೇಳಿರಿ; ನಿಮ್ಮ ಉದಾತ್ತವಿಚಾರಗಳೇನೆಂಬದನ್ನು ಹೇಳಿರಿ"

ವೀರಸೇನನು ಪುಲಿಕೇಶಿಯ ಮಾತುಗಳನ್ನು ಕೇಳಿ ಮುಖವೆತ್ತಿದನು. ಅವನು ಯಾವದೋ ಒಂದು ಹೊಸ ಯುಕ್ತಿಯನ್ನು ತೆಗೆದು, ಅದನ್ನು ಹೇಳುವದಕ್ಕೆ ಹವಣಿಸುತ್ತಿರುವಂತೆ ಅವನ ಮುಖಚರ್ಯೆಯಿಂದ ತಿಳಿದು ಬರುತ್ತಿತ್ತು:

"ಮಹಾರಾಜರೇ,..........."

ಹೀಗೆ ಸಂಬೋಧಿಸಿ, ವೀರಸೇನನು ಮುಂದೆ ಮಾತಾಡುವದಕ್ಕೆ ಅನುಮಾನಿಸುತ್ತ ಕುಳಿತನು. ಅದನ್ನು ನೋಡಿ ವಿಜಯಾಂಬಿಕೆಯು ತನ್ನ ಮಾನಸಬಂಧುವಿಗೆ ಧೈರ್ಯವುಂಟಾಗುವದಕ್ಕಾಗಿ:—

"ಅಣ್ಣಾ, ನಿನ್ನ ವಿಚಾರಗಳೇನಿರುವವೆಂಬದನ್ನು ನಿರ್ಭಯದಿಂದ ಹೇಳು. ನೀನವರಿಗೆ ಆಪ್ತಕೋಟಿಯವನಿದ್ದು, ಅವರ ಅಹಿತಚಿಂತನೆಯು ಕಾಲತ್ರಯದಲ್ಲಿಯೂ ನಿನ್ನಿಂದ ಆಗಲಾರದು. ಹೇಳು; ನಿನ್ನ ಅಭಿಪ್ರಾಯವನ್ನು ನಿರ್ದಾಕ್ಷಿಣ್ಯದಿಂದ ಹೇಳು."

"ನಾನು ಹೇಳುವ ಹೊಸ ಯುಕ್ತಿಯು ಒಳ್ಳೆಯ ಮಹತ್ವದ್ದಿರುವದು. ಅದರಂತೆ ಮಹಾರಾಜರು ಮಾಡಲೊಪ್ಪಿದರೆ, ನಮ್ಮ ಕಾರ್ಯವು ನಿರಾಯಾಸವಾಗಿ ಸಿದ್ಧಿಸುವದು."

"ಅದೇನು-ಅದೇನು?" ಎಂದು ಉತ್ಕಂಠತೆಯಿಂದ ವಿಜಯಾಂಬಿಕೆಯು ಪ್ರಶ್ನೆ ಮಾಡಲು, ವೀರಸೇನನು ಪುಲಿಕೇಶಿಯನ್ನು ಕುರಿತು:

"ನೀವು ನಾನು ಹೇಳಿದಂತೆ ನಡೆಯುವಿರೋ-ಇಲ್ಲವೋ ಎಂಬ

ದರ ಬಗ್ಗೆ ನನ್ನಲ್ಲಿ ಸಂಶಯವು ಹುಟ್ಟಿದೆ.''

''ನಿಸ್ಪೃಹವೃತ್ತಿಯಿಂದ ಮತವನ್ನು ವ್ಯಕ್ತಪಡಿಸುವದು ನಮ್ಮ ಕರ್ತವ್ಯವು ಅದನ್ನು ಪರಿಶೀಲಿಸಿ ಯೋಗ್ಯ ಕಂಡಂತೆ ನಡೆಯುವ ಭಾರವು ಮಹಾರಾಜರ ಮೇಲಿರುವದು. ಹೇಳಿರಿ; ವೀರಸೇನರೇ, ನಮ್ಮ ಕಾರ್ಯವು ಹೇಗೆ ಸುಸಾಧ್ಯವಾಗುವದೆಂಬದನ್ನು ಪ್ರಭು ಸನ್ನಿಧಿಯಲ್ಲಿ ಶ್ರುತಗೊಳಿಸಿರಿ''

''ಮಹಾರಾಜರೇ, ನಾನು ಚಾಲುಕ್ಯಸಾಮ್ರಾಜ್ಯದ ನಿಷ್ಠಾವಂತ ಸೇವಕನಿರುವೆನು. ನನ್ನ ತಂದೆಯಾದರೂ ಕಡೆತನಕ ಸಾಮ್ರಾಜ್ಯದ ಸೇವೆಯನ್ನು ಏಕನಿಷ್ಠೆಯಿಂದ ಮಾಡುತ್ತ ಬಂದದ್ದು ಸರ್ವ ಶ್ರುತವಿರುವದು. ಮಂಗಳೀಶನು ಪಟ್ಟಬಾಧ್ಯರಾದ ನಿಮ್ಮನ್ನು ಹಿಂದಕ್ಕೆಟ್ಟು ತನ್ನ ಪ್ರತಿಷ್ಠೆಯನ್ನು ಬೆಳೆಯಿಸತೊಡಗಿದ್ದನ್ನು ಸಹಿಸದೆ, ಅವನು ಬುದ್ಧರಾಜನ ಕಡೆಗೆ ಹಿಡೆದನು ಅವನು ಚಾಲುಕ್ಯಸಾಮ್ರಾಜ್ಯದ ದ್ರೋಹವನ್ನು ಮಾಡಬೇಕೆಂದು ಹೀಗೆ ಮಾಡಲಿಲ್ಲ. ಬುದ್ಧರಾಜನಿಂದ ಮಂಗಳೀಶನ ಪಾರುಪತ್ಯವಾಗಿ, ನಿಮ್ಮ ಹಿತವಾಗಬೇಕೆಂಬ ಬುದ್ಧಿಯಿಂದ ಮಾಡಿದ ಅವನ ಕೃತಿಗೆ ಯಶ ದೊರೆಯಲಿಲ್ಲ ನೀಚನೂ, ಕ್ರೂರನೂ ಆದ ಮಂಗಳೀಶನು ಎಲ್ಲರ ಮನಸ್ಸಿನ ವಿರುದ್ಧವಾಗಿ ನನ್ನ ತಂದೆಯನ್ನು ಕ್ರೂರತನದಿಂದ ಕೊಲ್ಲಿಸಿದನೆಂಬ ಸಂಗತಿಯು ತಮಗೆ ವಿದಿತವಿರುವದು. ಅಂತೆಯೇ ನಾನು ಸೇಡು ತೀರಿಸಿಕೊಳ್ಳುವ ಭಾವನೆಯುಳ್ಳವನಾಗಿರುವೆನು. ಪ್ರಕಟ ರೀತಿಯಿಂದ ಕಾದಿ ಜಯಶೀಲನಾಗುವ ಯೋಗ್ಯತೆಯಿಲ್ಲದ್ದರಿಂದ, ನಾನು ಅವನ ಸೇವಾವೃತ್ತಿಯನ್ನು ಕೈಕೊಂಡು, ಕರಳಲ್ಲಿ ಕತ್ತರಿಯಾಡಿಸುವ ಉದ್ಯೋಗದಲ್ಲಿ ತೊಡಗಿರುವೆನು. ಇಂತಹ ಸಾಹಸಿಯಾದ ನಾನು ಕಾಲತ್ರಯದಲ್ಲೂ ನಿಮಗೆ ಅಹಿತವಾಗುವ ಮಾರ್ಗವನ್ನು ತೋರಿಸಲಾರೆನು. ನನ್ನಲ್ಲಿ ನಿಮ್ಮ ವಿಶ್ವಾಸವಿದ್ದರೆ, ನೀವು ನಾನು ಹೇಳಿದಂತೆ ನಡೆಯಲೇ ಬೇಕು.''

''ವೀರಸೇನರೇ, ನಿಮ್ಮ ಮುತ್ಸದ್ದಿತನವು ಅವರ್ಣನೀಯವಿರು

ವದೆಂಬದನ್ನು ನಾನು ಎಂದೋ ಕಂಡು ಹಿಡಿದಿರುವೆನು. ನೀವು ಹೇಳಿದಂತೆ ನಡೆಯಲು ನಾನು ಸಿದ್ಧನಿರುವೆನು"

ಪುಲಿಕೇಶಿಯು ಹೀಗೆ ನುಡಿದ ಕೂಡಲೆ ವೀರಸೇನನಿಗೆ ಅತ್ಯಾನಂದವಾಯಿತು ಅವನು ಆನಂದಭರದಿಂದ:—

"ಮಹಾರಾಜರೇ, ಹಳ್ಳಿಯ ಕಾರಸ್ಥಾನದಿಂದ ಮಂಗಳೇಶನನ್ನು ಬಲೆಯಲ್ಲಿ ಹಾಕುವದಕ್ಕೆ ಒಂದು ಯುಕ್ತಿಯನ್ನು ಹುಡುಕಿರುವೆನು ಆ ಯುಕ್ತಿಯಿಂದ ನಮ್ಮ ಎಲ್ಲ ಕಾರ್ಯಗಳು ನಿರಾತಂಕವಾಗಿ ಕೈಗೂಡುವವು 'ನನಗೆ ರಾಜ್ಯವಾಳುವದು ಬೇಕಾಗಿಲ್ಲವೆಂದೂ, ನೀವೇ ಸಿಂಹಾಸನಾರೂಢರಾಗಿ ರಾಜ್ಯಕಾರಭಾರ ಮಾಡಬೇಕೆಂದೂ, ತೀರ್ಥ-ಯಾತ್ರೆಗಳನ್ನು ಮಾಡುತ್ತ ಶೇಷಾಯುಷ್ಯ ಕಳೆಯುವೆನೆ'ಂದೂ ನಿಮ್ಮ ಕಕ್ಕಂದಿರೆದುರಿನಲ್ಲಿ ಹೇಳಿ, ನೀವು ರಾಜಧಾನಿಯಿಂದ ಹೊರಡಬೇಕು ಹೀಗೆ ಮಾಡುವದರಿಂದ ಭಾವೀ ಅನಾಹುತದಲ್ಲಿ ನಿಮ್ಮ ಜೀವಿತವು ಸುರಕ್ಷಿತವಾಗುವದು; ಹಾಗು ಯಾವ ಬಗೆಯ ಅಪವಾದವೂ ನಿಮ್ಮ ತಲೆಯ ಮೇಲೆ ಬಾರದೆ, ಮಂಗಳೇಶನ ಪಶ್ಚಾತ್ ನೀವು ಅವರ ಪರಿವಾರದವರಿಗೂ ಸಹ ಪ್ರಿಯರಾಗುವಿರಿ ಮನಸ್ಸಿನಂತೆ ಕಾರ್ಯವಾಗಿ ಎಲ್ಲೆಡೆಯಲ್ಲಿಯೂ ಶಾಂತತೆಯು ಪ್ರಸ್ಥಾಪಿಸಲ್ಪಡುವವರೆಗೆ ನೀವು ತೀರ್ಥ-ಯಾತ್ರೆಗಳನ್ನು ಮಾಡುತ್ತ ಕಾಲಕಳೆಯಬೇಕು. ನೀವು ಇಲ್ಲಿಂದ ಹೊರಟ ಕೂಡಲೆ ನಾವು ನಮ್ಮ ಕಾರ್ಯಕ್ಕಾರಂಭಿಸುವೆವು. ಆಶ್ವಿನ ಶುದ್ಧ ನವಮಿಯ ಮಧ್ಯರಾತ್ರಿಯೇ ಮಂಗಳೇಶನ ಆಯುಷ್ಯದ ಕೊನೆಯ ವೇಳೆಯೆಂದು ನಿಮಗೆ ಹೇಳದಿರಲಾರೆನು."

ವೀರಸೇನನ ಯುಕ್ತಿವಾದವು ಸತ್ಯವರ್ಮನಿಗೆ ಬಳ್ಳಿಯ ಸಮಾಧಾನವನ್ನುಂಟು ಮಾಡಿತು. ಮಂಗಳೇಶನನ್ನು ಬಲೆಯಲ್ಲಿ ಹಿಡಿಯುವದಕ್ಕೆ ವಿಲಕ್ಷಣ ಹಂಚಿಕೆಯನ್ನು ತೆಗೆದದ್ದಕ್ಕೆ ಅವನು ತಲೆದೂಗುತ್ತ:—

"ವೀರಸೇನರೇ, ಹೀಗೆ ಮಾಡಿದರೆ ಮಂಗಳೇಶನು ಬಲೆಯಲ್ಲಿ

ಬೀಳುವದಕ್ಕೆ ಸಂದೇಹವಿಲ್ಲ. ನನಗೆ ಇನ್ನೊಂದು ಭಯವು ಬಾಧಿಸ ತೊಡಗಿರುವದು.''

"ಅದೇನು?" ವೀರಸೇನನು ಉತ್ಕಂಠೆಯಿಂದ ಕೇಳಿದನು

"ಮಂಗಳೇಶನು ಸಿಂಹಾಸನಾರೋಹಣ ಸಮಾರಂಭಕ್ಕಾಗಿ ತನ್ನ ಪಕ್ಷದ ಪುಂಡ ಮಂಡಲೇಶ್ವರರಾದ ರಾಷ್ಟ್ರಕೂಟ ಗೋವಿಂದ, ಅಪ್ಪಾಯಿಕ ಮೊದಲಾದವರಿಗೆ ಆಮಂತ್ರಣ ಪತ್ರಿಕೆಗಳನ್ನು ಕಳಿಸಿರುವನು. ಅವರು ಸೈನ್ಯಸಹಿತವಾಗಿ ಬಂದರೆ, ಅವನು ಅಜಿಂಕ್ಯನಾಗ ಬಹುದಲ್ಲವೆ?''

"ಈಗ ಕದಂಬ ಅರಸನೊಬ್ಬನು ಬಂದಿರುವನು. ಅವನನ್ನು ನನ್ನ ಕಡೆಗೆ ಎಳೆದುಕೊಂಡಿರುವೆನು ಅಪ್ಪಾಯಿಕ, ಗೋವಿಂದ ಮೊದಲಾದವರಿಗೆ ರಾಜಮುದ್ರೆಯ ಪತ್ರಗಳನ್ನು ಅತ್ಯಂತ ಗುಪ್ತ ರೀತಿಯಿಂದ ಕಳಿಸಿರುವೆನಾದ್ದರಿಂದ ಅವರು ಸಮಾರಂಭಕ್ಕೆ ಬರುವ ಸಂಭವವಿಲ್ಲ. ಏತಕ್ಕೆ ಬರಬೇಕು? ಮಂಗಳೇಶನ ಸ್ಮಶಾನೋತ್ಸವಕ್ಕೇನು?'' ಎಂದು ನಗುತ್ತ ವೀರಸೇನನು ನುಡಿದನು.

"ಏನೆಂದು ಬರೆದು ಕಳಿಸಿರುವಿರಿ?''

"ಸದ್ಯಕ್ಕೆ ಸಿಂಹಾಸನಾರೋಹಣ ಸಮಾರಂಭವನ್ನು ಈಡೇರಿಸದೆ, ಬಲಿಪ್ರತಿಪದೆಯ ಸುಮುಹೂರ್ತಕ್ಕೆ ಮಾಡುವದು ನಿಶ್ಚಿತವಾಗಿದೆಯೆಂದೂ ಆಗ್ಗೆ ಕರೆಯಿಸುತ್ತೇವೆಂದೂ ಬರೆದು ಕಳುಹಿಸಿರುವೆನು. ಮುಖ್ಯ ಮಂತ್ರಿಯಾದ ನನ್ನ ಹೆಸರೂ, ರಾಜಮುದ್ರೆಯೂ ಇದ್ದ ಮೇಲೆ ಸಂಶಯಕ್ಕೆ ಆಸ್ಪದವೇ ಇಲ್ಲ.''

"ವೀರಸೇನರೇ, ನಿಮ್ಮ ಹಂಚಿಕೆಯು ವಿಲಕ್ಷಣವಾದದ್ದಿರುವದು. ನೀವು ಹೇಳಿದ ಮೇರೆಗೆ ನಡೆಯುವದರಿಂದ, ಸೌಖ್ಯವು ಲಭಿಸುವದೆಂದು ನನ್ನ ನಂಬಿಗೆಯಾಯಿತು. ನಿಮ್ಮ ಹೇಳಿಕೆಯ ಮೇರೆಗೆ ನಡೆಯುವದಕ್ಕೆ ನಾನು ಸಿದ್ಧನಾದೆನು'' ಎಂದು ಪುಲಿಕೇಶಿಯು ನುಡಿಯಲು, ವೀರಸೇನನು ಸಂಭ್ರಮಗೊಂಡನು.

———

# ಶುಭಾಶೀರ್ವಾದ!



ಮಂಗಳೇಶನು ಓಲಗದಲ್ಲಿ ಕುಳಿತಿದ್ದನು. ಮಂತ್ರಿಸಾಮಂತಾದಿಗಳೂ, ಸಮಾರಂಭಕ್ಕೆ ಬಂದ ಸದ್ಗೃಹಸ್ಥರೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಂಡಿದ್ದರು. ಮುಂದಾಗಿ ಬರಬೇಕೆಂದು ಹೇಳಿಕಳಿಸಿದ ಮೇರೆಗೆ ಮಂಡಲೇಶ್ವರರೂ, ಸಾಮ್ರಾಜ್ಯದೊಳಗಿನ ಪ್ರಮುಖ ಜನರೂ ಇದುವರೆಗೆ ಬರಲಿಲ್ಲವೇಕೆಂದು ಮಂಗಳೇಶನು ವಿಚಾರಿಸತೊಡಗಿದ್ದನು. ಮಂಡಲೇಶ್ವರರಲ್ಲಿ ಗಂಗರಾಜನ ಹೊರತು ಯಾರೂ ಬಂದಿರಲಿಲ್ಲ. ಸೆಟ್ಟಿ-ಸಾವುಕಾರರೂ ರಾಜ್ಯದಲ್ಲಿಯ ಪ್ರಮುಖರೂ ಮಾತ್ರ ನೂರಾರು ಜನರು ಆಗಮಿಸಿದ್ದರು. ಆಗ ಮಂಗಳೇಶನು ವೀರಸೇನನನ್ನು ಕುರಿತು:—

"ಚಂದ್ರಸೇನಾ, ಅಪ್ಪಾಯಿಕ, ರಾಷ್ಟ್ರಕೂಟ ಗೋವಿಂದ ರಾಜ ಮೊದಲಾದ ನಮ್ಮ ಸ್ನೇಹಿತರು ಮುಂದಾಗಿ ಬರಬೇಕಾಗಿತ್ತು. ಇದುವರೆಗೆ ಬರದಿರಲೇನು ಕಾರಣ?"

"ಆಶ್ವಿನ ಶುದ್ಧ ನವಮಿಯ ಮಧ್ಯರಾತ್ರಿಯ ವರೆಗೆ ಆಮಂತ್ರಿತ ಜನರ ಮಾರ್ಗಪ್ರತೀಕ್ಷೆ ಮಾಡಲಿಕ್ಕೆ ಅಡ್ಡಿಯಿಲ್ಲ. ಮುಂದಾಗಿ ಹೋಗಿ ಮಾಡುವದೇನೆಂದೂ ಆಯತ್ತವಾದ ಸಮಯಕ್ಕೆ ಹೋಗಬೇಕೆಂದೂ ನಿಶ್ಚಯಿಸಿರಬಹುದು. ತಮ್ಮ ನಿರೂಪದ ಮೇರೆಗೆ ಬಾರದೆ ಇರುವಂತಹರು ಈ ಸಾಮ್ರಾಜ್ಯದಲ್ಲಿ ಯಾರಿರುವರು? ತಾವಾದರೂ ಅಷ್ಟೊಂದು ಅವಸರ ಮಾಡಲು ಕಾರಣವಿಲ್ಲ. ಸಾವಕಾಶವಾಗಿ ಬರಲೊಲ್ಲರೇಕೆ? ವಿಜಯಾದಶಮಿಯ ಸೂರ್ಯೋದಯದೊಳಗಾಗಿ ಎಲ್ಲರೂ ರಾಜಧಾನಿಯಲ್ಲಿದ್ದರಾಯಿತು" ಎಂದು ವೀರಸೇನನು ನುಡಿಯುವಷ್ಟರಲ್ಲಿ ದ್ವಾರರಕ್ಷಕನು ಮಂಗಳೇಶನಿಗೆ ಮೂರು ಮೂರು ಸಾರೆ ಅಭಿವಂದಿಸಿ ನಮ್ರಭಾವದಿಂದ:—

"ಮಹಾರಾಜರೆ, ದ್ವಾರದಲ್ಲಿ ಪುಲಿಕೇಶಿಮಹಾರಾಜರು ತಮ್ಮ ದರ್ಶನೋತ್ಕಂಠಿತರಾಗಿ ಬಂದಿರುವರು."

"ಯಾವನೋ ಅವನು ಮಹಾರಾಜನು? ಹಾದಿ ಹಾದಿಗಳಲ್ಲಿ ಅಲೆದಾಡುತ್ತ, ಬೀದಿ ಬೀದಿಗಳಲ್ಲಿ ಬೊಗಳುತ್ತಿರುವ ಶುನಕರಾಜನಿಗೆ ಮಹಾರಾಜನೆನ್ನುವ ಸ್ಥಿತಿಯು ಚಾಲುಕ್ಯ ಸಾಮ್ರಾಜ್ಯಕ್ಕೆ ಬಂದಿರುವದಿಲ್ಲ. ಇರಲಿ; ಅವನನ್ನು ಒಳಗೆ ಕಳಿಸು" ಎಂದು ನುಡಿದು, ಮಂಗಳೇಶನು ಆಶ್ಚರ್ಯತೆಯಿಂದ:—"ನಮ್ಮ ರಾಜ್ಯದೊಳಗಿನ ಪ್ರಜೆಗಳು ಮೂಢಭಕ್ತಿಯುಳ್ಳವರಿರುವರು. ಅದಕ್ಕೆ ಮಾಡುವದೇನೆ"ಂದು ನುಡಿಯುವಷ್ಟರಲ್ಲಿ ಪುಲಿಕೇಶಿಯು ಮಂಗಳೇಶನಿಗ ನಮಸ್ಕರಿಸಿ:—

"ಕಕ್ಕಂದಿರೇ, ನೀವು ಇದುವರೆಗೆ ನನ್ನನ್ನು ಹೊಟ್ಟೆಯ ಮಗನಿಗಿಂತಲೂ ಹೆಚ್ಚು ಪ್ರೀತಿಯಿಂದ ಸಲುಹಿದಿರಿ ನಾನು ತಮ್ಮ ಪ್ರೇಮಛತ್ರದಲ್ಲಿದ್ದುದರಿಂದಲೇ, ತಾಯಿ-ತಂದೆಗಳ ಮರಣ ದುಃಖವನ್ನು ಪೂರ್ಣವಾಗಿ ಮರೆತೆನು. ನಿಮ್ಮ ಉಪಕಾರವನ್ನು ತೀರಿಸುವದು ನನ್ನ ಕರ್ತವ್ಯವೆಂಬ ಮಾತನ್ನು ನಾನು ಅರಿತವನಿರುವೆನು. ತಮ್ಮ ವೃದ್ಧಾಪ್ಯಸ್ಥಿತಿಯಲ್ಲಿ ಪಿತೃಸೇವೆ ಮಾಡಿ ಋಣಮುಕ್ತನಾಗುವ ಭಾಗ್ಯವು ನನಗೆ ಲಭಿಸುವಂತಿಲ್ಲ. ಯಾಕಂದರೆ, ನನಗೆ ಈ ವಾತಾಪಿಪುರವು ಬೇಸರವಾಗಿರುವದು. ಯಾವ ಬಗೆಯ ಸುಖೋಪಭೋಗಗಳಿಗೂ ನನ್ನ ಮನಸ್ಸು ಒಲ್ಲದಾಗಿದೆ. ಕಾಶಿ, ರಾಮೇಶ್ವರ, ಬದರಿ, ಹರದ್ವಾರ ಮೊದಲಾದ ಯಾತ್ರೆಗಳನ್ನು ಮಾಡುತ್ತ ಕೇವಲ ಪರಮಾತ್ಮನ ಧ್ಯಾನದಲ್ಲಿ ಆಯುಷ್ಯಕ್ರಮಣ ಮಾಡಬೇಕೆಂಬ ಇಚ್ಛೆಯು ನನ್ನಲ್ಲಿ ಬಲವಾಗಿ ನೆಲಿಸಿರುವದು. ನನ್ನ ಸದಿಚ್ಛೆಗೆ ತಾವು ಅಡ್ಡಾಗಬಾರದು. ಅಣ್ಣನ ಮಗನೆಂಬ ವಾತ್ಸಲ್ಯದಿಂದ ನನ್ನನ್ನು ರಾಜಧಾನಿಯಲ್ಲಿಟ್ಟುಕೊಳ್ಳುವದಕ್ಕೆ ಯತ್ನಿಸಬಾರದು. ಕೀರ್ತಿವರ್ಮತಾತರ ತರುವಾಯ ಈ ಚಾಲುಕ್ಯ ಸಾಮ್ರಾಜ್ಯಕ್ಕೆ ಸ್ಥೈರ್ಯವನ್ನು ತಂದು ಅದನ್ನು ವಿಸ್ತಾರಗೊಳಿಸಿದ ಶ್ರೇಯವು ತಮ್ಮ ಪಾಲಿಗಿರುವದರಿಂದ, ಸಾಮ್ರಾಜ್ಯದ ಪೂರ್ಣಬಾಧ್ಯಸ್ಥರು

ನೀವೇ ಆಗಿರುವಿರಿ. ಸಿಂಹಾಸನಾರೋಹಣಸಮಾರಂಭವಾದರೂ ವಿಜಯಾದಶಮಿಯ ಸುಮುಹೂರ್ತದಲ್ಲಿ ನೆರವೇರಿಸಲ್ಪಡತಕ್ಕದ್ದಿರುವದು. ಈ ಸಂತೋಷದಾಯಕ ಸಂಗತಿಯನ್ನು ಕೇಳಿದಾಗಿನಿಂದ ನನ್ನ ಮನಸ್ಸು ಬಹಳೇ ತುಷ್ಟವಾಗಿರುವದು. ನಾಳೆ ಸೂರ್ಯೋದಯದೊಳಗಾಗಿ ನಾನು ವಿಜಯಾಂಬಿಕೆಯೊಡನೆ ರಾಜಧಾನಿಯಿಂದ ಹೊರಡಬೇಕೆಂದಿರುವೆನು. ನಿಮ್ಮ ಒಪ್ಪಿಗೆಯನ್ನಷ್ಟು ಪಡೆಯಬೇಕೆಂಬ ಉದ್ದೇಶದಿಂದ ಇಲ್ಲಿಯ ವರೆಗೆ ಬಂದೆನು. ನೀವು ಕೋಮಲಾಂತಃಕರಣಿಗಳೆಂಬದನ್ನು ಎಲ್ಲರ ನಿದರ್ಶನಕ್ಕೆ ತಂದುಕೊಡುವದಿದ್ದರೆ, ಸ್ವಸಂತೋಷದಿಂದ ನನಗೆ ಒಪ್ಪಿಗೆ ಕೊಡಿರಿ"

ಪುಲಿಕೇಶಿಯು ಹೀಗೆ ನುಡಿಯಲು, ಓಲಗದಲ್ಲಿ ಎಲ್ಲ ಜನರಿಗೂ ಪರಮಾಶ್ಚರ್ಯವಾಯಿತು. ಅವನ ಮಾತುಗಳಿಂದ ಮಂಗಳೇಶನಿಗಾದ ಆನಂದವನ್ನು ವರ್ಣಿಸಲು ಸಾಸಿರ ನಾಲಿಗೆಯ ಆದಿಶೇಷನಿಗೆ ಸಾಧ್ಯವಿರುವದಲ್ಲದೆ, ಅನ್ಯರಿಗೆ ಶಕ್ಯವೇ ಇಲ್ಲ. ಹರ್ಷೋನ್ಮಾದದಿಂದ ಅವನಿಗೆ ಸ್ಮೃತಿ ತಪ್ಪಿದಂತಾಗಿ ಕೆಲವು ವೇಳೆಯ ವರೆಗೆ ತಟಸ್ಥನಾಗಿ ಕುಳಿತಿದ್ದನು. ಪುಲಿಕೇಶಿಯು ರಾಜ್ಯತ್ಯಾಗ ಮಾಡಬೇಕೆಂದು ಯೋಚಿಸಿರುವದನ್ನು ನೋಡಿ ಮಂಗಳೇಶನ ಪಕ್ಷದವರಿಗೆ ಅತ್ಯಾನಂದವಾಯಿತು. ಬಹಳ ಸಾಹಸದಿಂದ ಆಗಬೇಕಾದ ಕಾರ್ಯವು ನಿರಾಯಾಸವಾಗಿ ಸಿದ್ಧಿಸಿದ್ದಕ್ಕಾಗಿ ಅವರಿಗೆ ಸಂಭ್ರಮವಾದದ್ದು ಸೋಜಿಗವಲ್ಲ; ಆದರೆ ಕೇವಲ ಪುಲಿಕೇಶಿಯ ಪಕ್ಷದ ಜನರ ಮನಸ್ಸು ಮಾತ್ರ ಅವನ ಮಾತಿನಿಂದ ಬಹಳೇ ತಲ್ಲಣಗೊಂಡಿತು. ಕ್ರೂರನಾದ ಮಂಗಳೇಶನ ಅನ್ಯಾಯದ ಆಚರಣೆಯನ್ನು ನೋಡಲಾರದೆ, ತಮ್ಮ ರಾಜನು ವನವಾಸಿಯಾಗುವದಕ್ಕೆ ಸಿದ್ಧನಾಗಿರುವನೆಂದು ಅವರು ಕಡು ದುಃಖಿತರಾದರು. ಅವರು ಮಂಗಳೇಶನ ನಿಂದೆಯನ್ನು ಮನದಲ್ಲಿ ಯಥೇಷ್ಟವಾಗಿ ಮಾಡತೊಡಗಿದರು. ಸದಮಲಾಂತಃಕರಣಿಯಾದ ರಾಜನು ತಮ್ಮನ್ನು ಬಿಟ್ಟು ಹೋಗುವನೆಂದೂ, ಕುಲಾಂಗಾರನಾದ ಮಂಗಳೇಶನು ತಮ್ಮನ್ನು ಮನ

ಬಂದಂತೆ ಪೀಡಿಸತೊಡಗುವನೆಂದೂ ಅವರು ಚಿಂತಿಸತೊಡಗಿದರು. ಅವರ ನೇತ್ರಗಳಲ್ಲಿ ದುಃಖಾಶ್ರುಗಳು ತುಂಬಿದವು. ದಬ್ಬಾಳಿಕೆಯ ಪಾಶದಿಂದ ಬಂಧಿಸಲ್ಪಟ್ಟವರಾದ ಅವರು ಬಹಿರಂಗದಲ್ಲಿ ಮಂಗಳೇಶನ ಪ್ರತೀಕಾರ ಮಾಡಲಸಮರ್ಥರಿದ್ದುದರಿಂದ, ಮನದಲ್ಲಿಯೇ ಕುದಿಯ ತೊಡಗಿದ್ದರು.

ಪುಲಿಕೇಶಿಯ ಬಾಯಿಯಿಂದ ಹೊರಟ ಅಮೃತೋಪಮ ವಾಣಿಯಿಂದ ಹರುಷಿತನಾದ ಮಂಗಳೇಶನು ಈಗ ಸ್ವಲ್ಪ ಎಚ್ಚರಗೊಂಡನು ಅವನು ಹುಚ್ಚರಂತೆ ಗಹಗಹಿಸಿ ನಗುತ್ತ:—

"ಯಾರು ಪುಲಿಕೇಶಿಯೇನು? ಓಹೋ! ನಿನಗೆ ತೀರ್ಥ-ಯಾತ್ರೆ ಮಾಡುವ ಹುಚ್ಚು ಹಿಡಿಯಿತೇನು? ಹೋಗು, ಬೇಕಾದಲ್ಲಿಗೆ ಬೇಕಾದಾಗ ಹೋಗು. ಹೋದವನು ತಿರುಗಿ ನನ್ನ ಕಣ್ಣಿಗೆ ಸಹ ಬೀಳಬೇಡ. ನಿನ್ನ ಮನೋದಯಕ್ಕ ಅಡ್ಡಾಗಿ ನಾನು ಪಾಪದ ಪಾಲುಗಾರನಾಗಲಾರೆನು. ನೀನು ಸಪತ್ನೀಕನಾಗಿ ಹೊರಡುವಿಯಾ? ಹಳ್ಳೇದಾಯಿತು. ಯೋಗಿ-ಯೋಗಿನಿಯರಾಗಿ ಕ್ಷೇತ್ರ-ಕ್ಷೇತ್ರಗಳಲ್ಲಿ ಅಲೆಯುತ್ತ ಸಂಚರಿಸಿರಿ. ಚಾಲುಕ್ಯಸಮ್ರಾಟನಾದ ಮಂಗಳೇಶ ಮಹಾರಾಜರು ಅಭ್ಯುದಯ ಹೊಂದಬೇಕೆಂದು ಪ್ರತಿಯೊಂದು ದೇವರಿಗೆ ಬೇಡಿಕೊಳ್ಳಿರಿ. ಕಾಶೀ ವಿಶ್ವನಾಥನಿಗೂ, ಬದರೀ ನಾರಾಯಣನಿಗೂ, ತಿರುಪತಿಯ ವೆಂಕಪ್ಪನಿಗೂ, ಶ್ರೀಶೈಲದ ಮಲ್ಲಿಕಾರ್ಜುನನಿಗೂ ನನ್ನ ಪ್ರಣಾಮಗಳನ್ನು ತಿಳಿಸು"ಎಂದು ನುಡಿದು, ಅವನು ವೀರಸೇನನನ್ನು ಕುರಿತು:— "ಚಂದ್ರಸೇನಾ, ಭಾಗ್ಯವು ಬರಹತ್ತಿತೆಂದರೆ ಹೀಗೆಯೇ ನೋಡು. ನಾವು ಯಾರ ಉಚ್ಚಾಟನೆಗಾಗಿ ಪ್ರಯತ್ನಿಸುತ್ತಿದ್ದೆವೋ, ಆ ಕಾರ್ಯವು ನಿರಾಯಾಸವಾಗಿ ಈಡೇರಬೇಕಾದರೆ, ನನ್ನ ಪೂರ್ವಾರ್ಜಿತ ಸುಕೃತವು ಘನವಾದದ್ದೆಂದು ಏಕೆ ಅನ್ನಲಾಗದು?"

ಮಂಗಳೇಶನ ಮಾತುಗಳನ್ನು ಕೇಳಿ ವೀರಸೇನನು ಮನದಲ್ಲಿ ನಗುತ್ತ:—"ನಿನ್ನ ಭಾಗ್ಯವು ಘನವಿರುವದೊ-ಗೋಲವಿರುವದೋ?

ಎಂಬದು ನವಮಿಯ ರಾತ್ರಿಯಲ್ಲಿ ಗೊತ್ತಾಗುವದು" ಎಂದು ಅಂದುಕೊಂಡು:—

"ಮಹಾರಾಜರೇ, ಈ ಪುಲಿಕೇಶಿಯು ಉಚ್ಚಾಟನೆಗಾಗಿ ನಾವು ಇಷ್ಟೊಂದು ಪ್ರಯಾಸಪಡುವ ಕಾರಣವಿದ್ದಿಲ್ಲ; ಆದರೂ ನಿರಾಯಾಸವಾಗಿ ಕಾರ್ಯವಾದದ್ದಕ್ಕೆ ನನಗೆ ನಿಮಗಿಂತ ಹೆಚ್ಚಾಗಿ ಆನಂದವಾಗಿದೆ ನಿಮ್ಮ ಕಡು ವೈರಿಯಾಗಿದ್ದವನು ಅಡವಿಯಡವಿ ತಿರುಗುತ್ತಾ ದುಃಖಪಡಬೇಕೆಂದೇ ನನ್ನ ಮನಸ್ಸಿನಲ್ಲಿತ್ತು. ಇಂದು ನನ್ನ ಹಾರೈಕೆಯು ಪೂರ್ತಿಯಾಯಿತು. ಇವನು ಆದಷ್ಟು ಬೇಗನೆ ಹೋಗಿ ಬಿಡಲಿ. ಕುಹಕರು ಏನಾದರೊಂದು ಹೇಳಿ ಮನಸ್ಸನ್ನು ತಿರುಗಿಸುವ ಸಂಭವವಿರುವದು. ಇವನು ಎಂತಹ ಹೇಡಿಯಾಗಿದ್ದರೂ ಸತ್ಯವರ್ಮನಂತಹ ಕ್ಷುಲ್ಲಕವೃತ್ತಿಯ ಜನರು ಇವನನ್ನೇ ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಸಾಹಸ ನಡೆಯಿಸಿದ್ದರು. ಅವರ ಪ್ರಯತ್ನವು ನಿಷ್ಪ್ರಯೋಜಕವಾಗಿ ಇನ್ನು ಮೇಲೆ ಅವರಿಗಾದರೂ ವನವಾಸ ದುಃಖವನ್ನು ಅನುಭವಿಸುವ ಸಮಯವು ಬಂತು!"

"ಪುಲಿಕೇಶಿಯು ವನವಾಸಿಯಾಗುವನೆಂದೂ, ಅವನ ಪರಿವಾರವು ಅವನ ಜೊತೆಯಲ್ಲಿ ಹೋಗುವದಕ್ಕೆ ರಾಜಾಜ್ಞೆಯಿರುವದೆಂದೂ ಇಂದೇ ಡಂಗುರ ಸಾರಿಸು" ಎಂದು ಮಂಗಳೇಶನು ನುಡಿದು, ಪುಲಿಕೇಶಿಯನ್ನು ಕುರಿತು ಆಧ್ಯತೆಯಿಂದ:—

"ಪುಲಿಕೇಶೀ, ನನಗೊಂದು ಹಂಚಿಕೆಯು ತೋರುತ್ತದೆ. ಅದರಂತೆ ಮಾಡಿದರೆ ನಿನಗೆ ಸೌಖ್ಯವು ಲಭಿಸಬಹುದು."

"ಮಹಾರಾಜರೇ, ಯಾವ ಹಂಚಿಕೆಯದು?"

"ನೀನು ತೀರ್ಥ-ಯಾತ್ರೆಗಳನ್ನು ಮಾಡುತ್ತ ದುಃಖಪಡುವದಕ್ಕಿಂತ ಚಾಲುಕ್ಯ ಸಾಮ್ರಾಜ್ಯದಲ್ಲಿ ಸೇವಾವೃತ್ತಿಯನ್ನು ಕೈಕೊಳ್ಳುವದು ವಿಹಿತವಲ್ಲವೇ? ಮಹಾರಾಣಿಯುವರಾದ ವಿನಯಾಂಬಿಕೆಯವರ ದಾಸೀ ಕಾರ್ಯವನ್ನು ವಿಜಯಾಂಬಿಕೆಯು ಮಾಡುತ್ತಿರಲಿ; ನಿನಗೆ ಅಂತಃಪುರದ ಕಾವಲುಗಾರರ ಮೇಲಿನ ಕೊತವಾಲಿ

ಕೆಯ ಕೆಲಸವನ್ನು ಕೊಡುತ್ತೇನೆ" ಎಂದು ಬುದ್ಧಿಪೂರ್ವಕವಾಗಿ ಮಾತನಾಡಿದನು.

ಅವನ ಈ ಹೇಸಿಭಾಷಣವನ್ನು ಕೇಳಿ, ಮಾನಧನನಾದ ಪುಲಿಕೇಶಿಯು ಸಂತಾಪದಿಂದ ಉರಿಯತೊಡಗಿದನು. ಅವನ ಕಣ್ಣುಗಳು ಕೆಂಪಗೆ ಕೆಂಡದಂತಾದವು. ಅವನ ವೀರಬಾಹುಗಳು ಟೊಂಕಕ್ಕೆ ಅಲೆದಾಡುತ್ತಿದ್ದ ಖಡ್ಗದ ಕಡೆಗೆ ಸಾಗತೊಡಗಿದವು. ಅವನು ತೀಕ್ಷ್ಣದೃಷ್ಟಿಯಿಂದ ಮಂಗಳೇಶನನ್ನೊಮ್ಮೆ ನೋಡಿದನು. ಇನ್ನು ಮೇಲೆ ಯಾವ ಪ್ರಮಾದವು ಘಟಿಸುತ್ತಿತ್ತೆಂಬದನ್ನು ಆಗ ಯಾರು ಹೇಳಬೇಕು? ಅಷ್ಟರಲ್ಲಿ ಚಾಣಾಕ್ಷನಾದ ವೀರಸೇನನು ಮಂಗಳೇಶನನ್ನು ಕುರಿತು:—

"ಮಹಾರಾಜರೇ, ನೀವು ಹೀಗೇಕೆ ಸ್ಮೃತಿಹೀನರಂತೆ ಮಾತನಾಡುವಿರಿ?" ಎಂದು ನುಡಿದು, ತಾಳ್ಮೆಯನ್ನು ಹೊಂದುವದಕ್ಕಾಗಿ ಪುಲಿಕೇಶಿಗೆ ಸೂಚನೆ ಮಾಡಿ, ಮಂಗಳೇಶನನು ಕುರಿತು:— "ಪಾರಮಾರ್ಥಮಾರ್ಗವನ್ನು ಹಿಡಿದವರಿಗೆ ನಿಮ್ಮ ರಾಜ್ಯದಲ್ಲಿ ಸೇವಾವೃತ್ತಿಯನ್ನು ಕೈಕೊಳ್ಳುವದಕ್ಕೆ ಹೇಳಬಹುದೇ! ಸರ್ವಸಂಗಪರಿತ್ಯಾಗ ಮಾಡಬೇಕೆನ್ನುವವರನ್ನು ಈ ಸಂಸಾರಲಂಪಟದಲ್ಲಿ ತೊಡಗಿಸುವದು ಅಧರ್ಮವು. ಆ ದಂಪತಿಗಳಿಗೆ ಮನಬಂದತ್ತ ಹೋಗುವದಕ್ಕೆ ಅಡ್ಡಿ ಮಾಡಬೇಡಿರಿ."

"ಕಕ್ಕಾ, ಸಂಸಾರದ ವಿಷಯಕ್ಕೆ ತಿರಸ್ಕಾರಭಾವನೆಯು ನನ್ನಲ್ಲಿ ಜಾಗ್ರತವಾಗಿರದಿದ್ದರೆ, ಹಿರಿಯರಾದ ನಿಮ್ಮ ಹೇಳಿಕೆಯಂತೆ ನಾನೂ, ವಿಜಯಾಂಬಿಕೆಯೂ ನಿಮ್ಮ ದಾಸ್ಯತ್ವದಲ್ಲಿರುವದಕ್ಕೆ ಅಡ್ಡಿಯಿರಲಿಲ್ಲ. ಕೀಳುಕೋಟಿಯವರಾದ ನಾವು ರಾಜಪರಿವಾರದ ಸೇವೆಯನ್ನು ಮಾಡಿ, ಆನಂದಬಡುವಂಥ ಸ್ಥಿತಿಯವರಿರುವದಿಲ್ಲ. ಪುರವಾಸಕ್ಕೆ ಬೇಸತ್ತು ವನವಾಸವನ್ನು ಭೋಗಿಸಬೇಕೆನ್ನುವವರಿಗೆ, ದಾಸ-ದಾಸಿಯರ ಮಹಾಪದಗಳು ಏಕೆ ಬೇಕು? ನಾವು ನಾಳೆ ಬೆಳಗ್ಗೆ ಹೊರಡುವೆವು. ಅಜ್ಞೆಯನ್ನು ಕೊಡಿರಿ."

"ಹೋಗು-ಹೋಗೆಂದು ನಿನಗೆ ಎಷ್ಟು ಬಾರಿ ಹೇಳಬೇಕು? ಹೋಗು, ಬೇಗನೆ ಹೋಗು. ಹೋದವನು ಅತ್ತ ಕಡೆಗೇ ಹೋಗು! ಮತ್ತೆ ನನ್ನ ಕಣ್ಣಿಗೆ ಬೀಳದೆ ಎತ್ತಲಾದರೂ ಹೋಗು!" ಎಂದು ಕರ್ಕಶಧ್ವನಿಯಿಂದ ಮಂಗಳೇಶನು ನುಡಿದನು.

ಅಹಹಾ! ಎಂತಹ ನಿರೂಪವಿದು! ಎಂತಹ ಆಶೀರ್ವಾದವಿದು! ಇದ್ದರೆ ಇಂತಹ ಬಾಂಧವರಿರಬೇಕು! ಇದಕ್ಕೇ ಶುಭಾಶೀರ್ವಾದವೆನ್ನಬೇಕು!!

ಮಂಗಳೇಶನ ಮಾತುಗಳು ಪೂರ್ಣವಾಗಿ ಮುಗಿಯುವದರೊಳಗೆ ಪುಲಿಕೇಶಿಯು ಓಲಗದಿಂದ ಹೊರಬಿದ್ದಿದ್ದನು. ಅವನು ಹೋದನೆಂದು ಮಂಗಳೇಶನಿಗೆ ತಿಳಿದ ಕೂಡಲೆ ಅವನು ಆನಂದಮಯನಾಗಿ:—

"ಶಿವವರ್ಮರೇ, ಇಂದು ನಮ್ಮ ಕಂಟಕವು ದೂರವಾಯಿತು! ಯಾಕೆ? ಚಂದ್ರಸೇನಾ, ವಿಜಯಾದಶಮಿಯ ಸಮಾರಂಭಕ್ಕೆ ಇನ್ನು ಯಾವ ವಿಘ್ನಗಳ ಭಯವೂ ಇಲ್ಲವಷ್ಟೇ?"

"ವಿಜಯಾದಶಮಿಯ ಸಮಾರಂಭಕ್ಕೆ ವಿಘ್ನಗಳೊದಗುವವೆಂದು ನಾನು ಕನಸಿನಲ್ಲಿಯೂ ತಿಳಿದಿರಲಿಲ್ಲ. ನವಮಿಯ ಮಧ್ಯರಾತ್ರಿಯೊಳಗೆ ಎಲ್ಲ ಬಗೆಯ ವಿಘ್ನಗಳನ್ನು ನಿವಾರಿಸುವ ಪ್ರತಿಜ್ಞೆ ಮಾಡಿರುವ ನನಗೆ, ವಿಜಯಾದಶಮಿಯ ದಿವಸ ಗಂಡಾಂತರಗಳೊದಗುವವೆಂಬದರ ಭೀತಿಯೇನು?"

"ಚಂದ್ರಸೇನರೇ, ನೀವು ಬೇಕಾದಂತಹ ಸಾಹಸಿಗಳಿದ್ದರೂ, ನನ್ನ ಸೇನಾ ಸಾಮರ್ಥ್ಯವು ಎಂತಹ ಅದ್ವಿತೀಯವಿದ್ದರೂ ಬೂದಿ ಮುಚ್ಚಿದ ಕೆಂಡದಂತಿದ್ದ ಪುಲಿಕೇಶಿಯ ಪರಿವಾರವು ದೊಡ್ಡದಿರುವದರಿಂದ ಪ್ರಸಂಗದಲ್ಲಿ ನಮ್ಮ ಕಾರ್ಯಕ್ಕೆ ವಿಘ್ನ ತರುವರೆಂಬ ಮಾತು ನನ್ನನ್ನು ಬಾಧಿಸತೊಡಗಿತ್ತು. ಈಗ ಮಾತ್ರ ನಿಶ್ಚಿಂತನಾದೆನು." ಎಂದು ಶಿವವರ್ಮನು ಆನಂದೋದ್ಗಾರ ತೆಗೆದನು.

"ಇಂದು ಎಲ್ಲರೂ ನಿಶ್ಚಿಂತರಾದೆವು. ಮಹಾರಾಜರ ಶುಭಾ

ಶೀರ್ವಾದದಿಂದ ಪುಲಿಕೇಶಿಯಾದರೂ ಚಿಂತಾರಹಿತನಾಗಿರಲಿಕ್ಕೆ ಬೇಕು " ಎಂದು ವೀರಸೇನನು ನಗುತ್ತ ನುಡಿಯಲು, ಹಿಲಗದಲ್ಲಿ ಕೆಲವರು ಹೊಟ್ಟೆಹಿಡಿಸಲಾರದಷ್ಟು ನಗತೊಡಗಿದರು. ಪುಲಿಕೇಶಿಯ ಪಕ್ಷದವರ ಮುಖದ ಮೇಲೆ ಚಿಪ್ಪಟೆದರೂ ರಕ್ತವಿಲ್ಲದಿರುವಾಗ ಅವರಿಗೆ ನಗೆಯು ಹೇಗೆ ಬರಬೇಕು? ಶಿವವರ್ಮನೂ ನಕ್ಕು-ನಕ್ಕು ಬೇಸತ್ತನು. ಮಂಗಳೇಶನು ತನ್ನ ಶುಭಾಶೀರ್ವಾದ ವಾಣಿಯನ್ನು ನೆನಿಸಿಕೊಂಡು ಬಿದ್ದು ಬಿದ್ದು ನಗತೊಡಗಿದನು.

"ಮಂಗಳೇಶಾ! ನಗು! ನಗು! ಇದೊಂದು ದಿನ ನಗು! ನಾಳೆಯೊಂದು ದಿನ ನಗು! ನಾಡದು ಮಧ್ಯರಾತ್ರಿಗೊಮ್ಮೆ ಕಡೆಯ ಬಾರಿ ನಗು!!!"

ಎಂದು ಕರ್ನಾಟಕ ದೇವಿಯು ಅಶರೀರವಾಣಿಯಿಂದ ಮಂಗಳೇಶನಿಗೆ ಶುಭಾಶೀರ್ವಾದವಿತ್ತಂತೆ ಕೆಲ ಜನರಿಗೆ ಭಾಸವಾಯಿತು!

---

## ರಾಮರಾಜ್ಯ ವಿಯೋಗ!

ಪ್ರಾತಃಕಾಲದ ಸಮಯವು. ಬಾಲರವಿಯು ಮೂಡಣಗಿರಿಯ ಕೋಡಗಲ್ಲೇರಿದ್ದನು. ಅವನ ಎಳೆಯ ಕಿರಣಗಳು ವಾತಾಪಿಪುರದ ಕೋಟೆ-ಕೊತ್ತಳಗಳ ಮೇಲೆಯೂ, ಸೌಧಾಗ್ರಗಳ ಮೇಲೆಯೂ ಬಿದ್ದು, ಮೊದಲೇ ಸುಂದರವಾಗಿದ್ದ ರಾಜಧಾನಿಯನ್ನು ಮತ್ತಿಷ್ಟು ಶೋಭೆಗೊಳಿಸಿದ್ದವು. ವನೋಪವನಗಳಲ್ಲಿಯ ಪುಷ್ಪಗಂಧವನ್ನು ಹೊತ್ತುಕೊಂಡು ಅಲೆದಾಡ ತೊಡಗುವ ಮಂದಮಾರುತನ ಶೀತಲಹರಿಯಿಂದ ಮನೋಹ್ಲಾದವಾಗುತ್ತಲಿತ್ತು. ಪ್ರಭಾತಸಮಯದ ಇಂತಹ ಆನಂದದಾಯಕವಾದ ನೈಸರ್ಗಿಕ ಸೌಖ್ಯದ ಕಡೆಗೆ ಇಂದು ವಾತಾಪಿಪುರದ ನಾಗರಿಕರ ಲಕ್ಷ್ಯವಿರಲಿಲ್ಲ. ಪುರವಾಸಿಗಳೆಲ್ಲರೂ ಅನೇಕ ವಿಧವಾದ ಗೊಂದಲದಲ್ಲಿ ಬಿದ್ದಿದ್ದರು. ಹಿಂದು ಕಡೆಗೆ ಸಿಂಹಾಸನಾರೋಹಣ ಸಮಾರಂಭದ ಸಿದ್ಧತೆಯು ನಡೆದಿದ್ದರೆ, ಮತ್ತೊಂದು

ಕಡೆಗೆ ಚಾಲುಕ್ಯರ ಪದಚ್ಯುತ ಸಮ್ರಾಟನು ಪ್ರಸ್ಥಾನ ಕಟ್ಟುವ ಗೊಂದಲವು ನಡೆದಿತ್ತು. ಒಂದು ಕಡೆಯಲ್ಲಿ ತಳಿರು-ತೋರಣಗಳಿಂದಲೂ, ಪತಾಕೆಗಳಿಂದಲೂ ಪಟ್ಟಣವನ್ನು ಶೃಂಗರಿಸುವ ಕಾರ್ಯವು ನಡೆದಿದ್ದರೆ ಮತ್ತೊಂದು ಕಡೆಗೆ ಮನೆಗೆ ಬೀಗ ಹಾಕುವ ಕಾರ್ಯವು ಸಾಗಿತ್ತು; ತಮ್ಮ ಪಕ್ಷದವನಾದ ಮಂಗಳೇಶನು ಪಟ್ಟವೇರುವನೆಂಬ ಸಂಭ್ರಮದಿಂದ ಕೆಲ ಜನರು ನಗತೊಡಗಿದ್ದರೆ, ಮತ್ತೊಂದು ಕಡೆಗೆ ರಾಜ್ಯದ ಬಾಧ್ಯಸ್ಥನೂ, ಕೃಪಾಳುವೂ ಆದ ಶ್ರೀರಾಮಚಂದ್ರನಂತಹ ಪುಲಿಕೇಶಿಯು ರಾಜ್ಯತ್ಯಾಗ ಮಾಡಿ ವನವಾಸಿಯಾಗುವನೆಂಬ ದುಃಖದಿಂದ ಪುಲಿಕೇಶಿಯ ಪಕ್ಷದ ಜನರು ಕಣ್ಣೀರಿಡತೊಡಗಿದ್ದರು. ಸಮಾರಂಭಕ್ಕೆಂದು ಮಂಗಳೇಶನ ಜನರು ಬಂದು ರಾಜಧಾನಿಯನ್ನು ತುಂಬತೊಡಗಿದ್ದರೆ, ರಾಜನು ವನವಾಸಿಯಾದ ಮೇಲೆ ತಾವೇಕೆ ಪುರವಾಸಿಗಳಾಗಬೇಕೆಂದು ಪುಲಿಕೇಶಿಯ ಜನರು ಪುರತ್ಯಾಗ ಮಾಡಲು ಸಜ್ಜಾಗಿದ್ದರು. ಹೀಗೆ ಎತ್ತ ನೋಡಿದತ್ತ ರಾಜಧಾನಿಯು ತುಂಬ ಒಂದಿಲ್ಲೊಂದು ಬಗೆಯಿಂದ ಗೊಂದಲವೆದ್ದಿತ್ತು.

ಮುಂಚಿನ ದಿನದಲ್ಲಿ ದೇಶತ್ಯಾಗ ಮಾಡುವೆನೆಂದು ಹೇಳಿ ಪುಲಿಕೇಶಿಯು ಮಂಗಳೇಶನಿಂದ ಶುಭಾಶೀರ್ವಾದವನ್ನು ಪಡೆದಿದ್ದರೂ, ಕಡೆಯ ಅಜ್ಞೆಯನ್ನು ಹೊಂದುವದಕ್ಕಾಗಿ ವಿಜಯಾಂಬಿಕೆಯೊಡನೆ ಅವನು ಅರಮನೆಗೆ ಬಂದನು ವಿನಯಾಂಬಿಕೆಯು ಮಂಗಳೇಶನೊಡನೆ ಸಂಭ್ರಮದ ಗೋಷ್ಟಿಗಳನ್ನು ನಡೆಯಿಸಿದ್ದಳು. ಪುಲಿಕೇಶಿ-ವಿಜಯಾಂಬಿಕೆಯರು ಅಲ್ಲಿಗೆ ಬಂದದ್ದನ್ನು ನೋಡಿ, ಅವರ ಮಾತುಗಳು ಅಷ್ಟಕ್ಕೇ ನಿಂತವು.

“ಮಾತೇ, ಹೋಗಿ ಬರುವೆನು; ಕಕ್ಕಾ ಹೋಗಿ ಬರುವೆನು. ಜನನೀ-ಜನಕರಂತಿರುವ ತಮ್ಮ ಆಶೀರ್ವಾದ ಛತ್ರವು ನನ್ನ ತಲೆಯ ಮೇಲೆ ಅಖಂಡವಾಗಿರಬೇಕೆಂದು ಬೇಡಿಕೊಳ್ಳುವೆನು” ಎಂದು ಪುಲಿಕೇಶಿಯು ಈರ್ವರನ್ನೂ ನಮಸ್ಕರಿಸಿದನು.

“ಅತ್ತೆಯವರೇ, ನನ್ನಿಂದ ಏನಾದರೂ ಅಪರಾಧವು ಘಟಿಸಿ

ದ್ದರೆ ಕ್ಷಮಿಸಿರಿ. ಮಾವನವರೇ, ಈ ಅಜ್ಞ ಬಾಲಿಕೆಯು ಏನಾದರೂ ತಪ್ಪು ಮಾಡಿದ್ದರೆ ಮನದಲ್ಲಿ ಹಿಡಿಯಬೇಡಿರಿ'' ಎಂದು ವಿಜಯಾಂಬಿಕೆಯು ಈರ್ವರ ಚರಣಗಳಿಗೆ ಎರಗಿದಳು.

''ವಿಜಯಾಂಬಿಕೇ, ವನವಾಸ ದುಃಖವನ್ನು ಅನುಭವಿಸುವದಕ್ಕೆ ನೀನೂ ಸಿದ್ಧಳಾದೆಯಾ? ರಾಜಪುತ್ರಿಯಾದ ನೀನು ವನ-ವನಗಳಲ್ಲಿ ಅಲೆಯುತ್ತ, ತೀರ್ಥ-ಯಾತ್ರೆಗಳನ್ನು ಮಾಡುತ್ತ, ಭಿಕ್ಷಾನ್ನವನ್ನು ಭುಂಜಿಸುತ್ತ ಕಾಲಕ್ಷೇಪ ಮಾಡಬೇಕಾಯಿತೆ! ಕಾಲಗತಿಯು ವಿಚಿತ್ರವು! ಅದೃಷ್ಟದಲ್ಲಿ ಇದ್ದರೆ ಗತ್ಯಂತರವಿಲ್ಲ'' ಎಂದು ಗರ್ವಿತಳಾದ ವಿನಯಾಂಬಿಕೆಯು ನುಡಿದಳು.

''ಅಂತೆಯೇ ನಾನೂ ವನವಾಸಕ್ಕೆ ಸಿದ್ಧಳಾಗಿರುವೆನು. ಸಹಧರ್ಮಚಾರಿಣಿಯು ಪತಿಯ ಸುಖ-ದುಃಖಗಳಿಗೆ ಪಾಲುಗಾರಳಿರದಿದ್ದರೆ, ಅವಳಿಗೆ 'ಸಾಧ್ವಿ' ಎಂದು ಯಾರಾದರೂ ಹೇಳಬಹುದೇ? ಚಾಲುಕ್ಯಸಮ್ರಾಟನು ವನವಾಸ ದುಃಖವನ್ನನುಭವಿಸಲು ಸಿದ್ಧನಿರುವಾಗ ಯಃಕಶ್ಚಿತ ರಾಜಪುತ್ರಿಯಾದ ನನ್ನ ಪಾಡೇನು? ಕಾಲಾಯ ತಸ್ಮೈ ನಮಃ!''

''ನೀವೀರ್ವರೂ ಯೋಗಿ-ಯೋಗಿನಿಯರಾಗಿ ತೀರ್ಥ-ಕ್ಷೇತ್ರಗಳನ್ನು ಮಾಡುತ್ತ, ದೇಶ-ದೇಶಗಳಲ್ಲಿ ಸಂಚರಿಸಿ ಶೇಷಾಯುಷ್ಯವನ್ನು ಕಳೆಯುವಿರೆಂದಂತಾಯಿತು. ಹಾಗಾದರೆ ನಿಮ್ಮ ಭೆಟ್ಟಿಯು ಇದೇ ಕೊನೆಯದೇನು?''

''ಅಮ್ಮಾ, ಅದನ್ನು ಹೇಗೆ ಹೇಳಬೇಕು?'' ಎಂದು ಪುಲಿಕೇಶಿಯು ನುಡಿಯಲು, ಮಂಗಳೇಶನು ಹಿಗ್ಗಿಯ ಆಧ್ಯಕತೆಯಿಂದ—

''ನಿಶ್ಚಯ-ನಿಶ್ಚಯ! ಮಹಾರಾಣಿಯವರೇ, ನಮ್ಮ ಹಾಗು ಅವರ ಭೆಟ್ಟಿಯು ಇದೇ ಕೊನೆಯದು!''

''ಜಗತ್ತಿನಲ್ಲಿ ಎಲ್ಲ ಕಾರ್ಯಗಳು ಪರಮಾತ್ಮನ ಪ್ರೇರಣೆಯಿಂದಲೇ ನಡೆಯುವವು. ಅವನ ಪ್ರೇರಣೆಯು ಹಾಗಿದ್ದರೆ ಇದೇ ಕೊನೆಯ ಭೆಟ್ಟಿಯಾಗಬಹುದು.'' ಎಂದು ನುಡಿದು ಪುಲಿಕೇಶಿಯು:—

"ನಮಗೆ ಅಪ್ಪಣೆಯನ್ನು ಕೊಡಿರಿ, ವೃಥಾ ಕಾಲಹರಣ ಮಾಡುವದರಲ್ಲಿ ತಥ್ಯವಿಲ್ಲ"

"ಹೋಗುವದಕ್ಕಾಗಿ ಎಷ್ಟು ಸಾರೆ ಹೇಳಬೇಕು? ನಿಮಗೆ ಆಸೇತು-ಹಿಮಾಚಲದ ವರೆಗೂ ಮುಕ್ತದ್ವಾರವಿದೆ. ಬೇಕಾದಲ್ಲಿಗೆ ಹೋಗಿರಿ" ಎಂದು ಮಂಗಳೇಶನು ನುಡಿಯಲು, ವಿನಯಾಂಬಿಕೆಯು ತಿರಸ್ಕಾರದಿಂದ:—

"ಇವರ ಮನಸ್ಸಿನಲ್ಲಿ ತೀರ್ಥ-ಯಾತ್ರೆಗಳಿಗೆ ಹೊರಡುವ ವಿಚಾರವಿದ್ದಂತೆ ತೋರುವದಿಲ್ಲ. ಹಾಗಿದ್ದರೆ ಈ ಬಗೆಯಾಗಿ ಅಟ್ಟ ಹಾಸವನ್ನೇ ಮಾಡುತ್ತಿರಲಿಲ್ಲ. ಏನೋ ಒಂದು ವೇಷ ಹಾಕಿದಂತೆ ತೋರುತ್ತಿದೆ." ಎಂದು ನುಡಿಯಲು, ವಿಜಯಾಂಬಿಕೆಯು:—

"ಅನ್ನಿರಿ; ಬೇಕಾದ ಹಾಗೆ ಅನ್ನಿರಿ. ನಿಮಗೆ ಅನುಕೂಲ ಕಾಲವಿರುವದರಿಂದ ಹೇಗೆ ಮಾತನಾಡಿದರೂ ಚಂದ ಕಾಣುತ್ತದೆ."

"ಆಗಲಿ, ಮಾತೇ ಬರುತ್ತೇನೆ. ಕಕ್ಕಾ ನಮಿಸುವೆನು" ಎಂದು ಪುಲಿಕೇಶಿಯು ಈರ್ವರನ್ನು ವಂದಿಸಿ, ಅಲ್ಲಿಂದ ಹೊರಟನು. ವಿಜಯಾಂಬಿಕೆಯಾದರೂ ಅವನ ಬೆನ್ನಹಿಂದೆಯೇ ನಡೆದಳು.

ಚಿಕ್ಕವಯಸ್ಸಿನ ಅರಸು-ಅರಸಿಯರು ರಾಜ್ಯತ್ಯಾಗ ಮಾಡುವದನ್ನು ನೋಡಿ, ಅಲ್ಲಿಯ ಪ್ರಜೆಗಳು ಗೋಳಿಟ್ಟರು. ಅವರ ದುಃಖವನ್ನು ಬಣ್ಣಿಸಲುಳವಲ್ಲ. ಎಷ್ಟೋ ಜನರು ತಾವಾದರೂ ತಮ್ಮ ಸ್ವಾಮಿಯ ಹಿಂದೆಯೇ ನಡೆಯಬೇಕೆಂದು ಮನೆ-ಮಾರುಗಳನ್ನು ತ್ಯಜಿಸಿ ಹೊರಟರು. ಎಷ್ಟೋ ಜನರು ರಾಜ್ಯವನ್ನು ಬಿಟ್ಟು ಹೋಗಬಾರದೆಂದು ಪುಲಿಕೇಶಿಯ ರಥ-ಕುದುರೆಗಳ ಮುಂದೆ ಅಡ್ಡ ಮಲಗಿದರು ರಾಮರಾಜ್ಯವಿಯೋಗವಾಗುವ ಕೋಸಲದೇಶದ ಪ್ರಜೆಗಳು ಗೋಳಿಟ್ಟಂತೆ, ವಾತಾಪಿಯ ಜನರು ಪುಲಿಕೇಶಿವಿಯೋಗಕ್ಕಾಗಿ ಶೋಕಿಸತೊಡಗಿದರು. ಮಂಗಳೇಶನನ್ನು ಸದೆಬಡೆದು, ನಿಮ್ಮನ್ನು ಪುನಃ ಸಿಂಹಾಸನದ ಮೇಲೆ ಕುಳ್ಳಿರಿಸುವೆವೆಂದು ಎಷ್ಟೋಜನರು ಅವನಿಗೆ ಆಶ್ವಾಸನವನ್ನಿತ್ತರು. ಆಗ ಅವನು ತನ್ನ ಪ್ರಜೆಗಳನ್ನು ಕುರಿತು:

"ನನ್ನ ಪ್ರಿತಿಯ ಪ್ರಜಾಜನರೇ, ನಾನು ರಾಜ್ಯತ್ಯಾಗ ಮಾಡು ವೆನೆಂದು ಚಿಂತಿಸುವ ಕಾರಣವಿಲ್ಲ. ಈಶ್ವರೇಚ್ಛೆಯು ಹೇಗಿರುವದೋ ಹಾಗೆ ಕಾರ್ಯಗಳು ನಡೆಯುತ್ತಿರುತ್ತವೆ. ದೇವರ ಅನುಗ್ರಹವಿದ್ದರೆ ನಿಮ್ಮ ಮನಸ್ಸಿನಂತೆ ಎಲ್ಲ ಕಾರ್ಯಗಳೂ ಕೈಗೂಡಬಹುದು. ಪ್ರಜಾಕ್ಷೋಭೆಗೊಳಗಾದ ಅರಸನ ಆಳಿಕೆಯು ನೀರ ಮೇಲಿನ ಗುಳ್ಳೆಯಂತೆ ಅಶಾಶ್ವತವೆಂಬ ಮಾತನ್ನು ಯಾರೂ ಮರೆಯಲಾಗದು. ಯಾವನು ಸ್ವಾರ್ಥಕ್ಕಾಗಿ ಅನ್ಯಾಯ ಮಾಡುವನೋ, ಯಾವನು ಪ್ರಜಾಜನರ ಹಿತದ ಕಡೆಗೆ ಲಕ್ಷ್ಯಗೊಡುವದಿಲ್ಲವೋ, ಯಾವನು ಅನ್ಯರ ಸ್ವತ್ತನ್ನು ಅಪಹರಿಸಿ ತನ್ನ ಸ್ವಾಮಿತ್ವವನ್ನು ಸ್ಥಾಪಿಸಲಿಕ್ಕೆ ಹೆಣಗುವನೋ, ಅವನು ತನ್ನಿಂದ ತಾನೇ ನಾಶವಾಗುವದರಲ್ಲಿ ಸಂದೇಹವಿಲ್ಲ. ಪರಮಾತ್ಮನು 'ಸತ್ಯಮೇವ ಜಯತೆ' ಎಂಬ ಸಿದ್ಧಾಂತ ವಾಕ್ಯವನ್ನು ಸತ್ಯಮಾಡುವದಕ್ಕೆ ಬದ್ಧಕಂಕಣನಾಗಿ ನಿಂತಿರುತ್ತಾನೆಂಬ ಮಾತನ್ನು ಮರೆಯಬೇಡಿರಿ."

ಹೀಗೆ ಪುಲಿಕೇಶಿಯು ತನ್ನ ಪ್ರಜೆಗಳಿಗೆ ಸಮಾಧಾನ ಹೇಳತೊಡಗಿದ್ದನು. ಎಷ್ಟೋ ಜನರು ಅವನ ಹಿಂದೆ ಬರುವದಕ್ಕಾಗಿ ಹಟ ತೊಟ್ಟಿದ್ದರು. ಸೀತಾದೇವಿಯಂತಹ ನಾರೀರತ್ನವನ್ನು ಅಡವಿಗೆ ಹೇಗ ಕಳಿಸಬೇಕೆಂದು ಪೌರ ಸ್ತ್ರೀಯರು ಗೋಳಿಟ್ಟಿದ್ದರು. ಮಂಗಳೇಶನ ಅಂಜಿಕೆಗಾಗಿ ಅವರು ದೇಶತ್ಯಾಗ ಮಾಡಲು ಸಿದ್ಧರಾಗಿದ್ದರಿಂದ, ಪೌರವಾಸಿಗಳು ಅವನನ್ನು ಯಥೇಷ್ಟವಾಗಿ ನಿಂದಿಸತೊಡಗಿದ್ದರು. ಎಷ್ಟೋ ಜನರು ಮಂಗಳೇಶನ ಅರಮನೆಯ ಮೇಲೆ ಸಾಗಿ ಹೋಗಬೇಕೆಂದು ನಿಶ್ಚಯಿಸಿದ್ದರು. ಪುಲಿಕೇಶಿಯು ಜನರ ಧೋರಣವನ್ನು ಕಂಡು ಹಿಡಿದು, ಅವರು ಹರಿಬೀಳಬಾರದೆಂಬ ಉದ್ದೇಶದಿಂದ:—

"ನಾನು ದೇಶತ್ಯಾಗ ಮಾಡಿದೆನೆಂಬ ರೋಷದಿಂದ ಯಾರೂ ಅತ್ಯಾಚಾರ ಮಾಡತಕ್ಕದ್ದಲ್ಲ. ಹಾಗೆ ಮಾಡಿದರೆ ನೀವು ನನ್ನ ಹಾಗು ಚಾಲುಕ್ಯಸಾಮ್ರಾಜ್ಯದ ಅಹಿತಚಿಂತನೆ ಮಾಡಿದಂತಾಗು

ವದು. ಶತ್ರುಪಕ್ಷದ ಕಡೆಗೆ ರಾಜ್ಯಸೂತ್ರಗಳಿರುವದರಿಂದಲೂ, ಆ ಪಕ್ಷವು ಪ್ರಬಲವಿದ್ದುದರಿಂದಲೂ ಸದ್ಯಕ್ಕೆ ಅಹಿಂಸಾಪ್ರತೀಕಾರವೇ ಯೋಗ್ಯವೆಂದು ತಿಳಿಯಿರಿ. ಶಸ್ತ್ರವನ್ನು ಹಿಡಿಯುವದಕ್ಕೆ ನೀವು ಯೋಗ್ಯರಾದಿರೆಂದರೆ, ಅಂತಹಕಾಲವು ಒದಗಿತೆಂದರೆ, ಐಕ್ಯದಿಂದ ನಿಮ್ಮ ಪಕ್ಷವು ಪ್ರಬಲವಾಯಿತೆಂದರೆ ಮನಬಂದ ಮಾರ್ಗದಿಂದ ಸ್ವಾತಂತ್ರ್ಯವನ್ನು ಪಡೆಯಲು ಅಡ್ಡಿಯಿಲ್ಲ. ಆವೇಶದ ಭರದಲ್ಲಿ ಅವಿಚಾರದಿಂದ ನಡೆದರೆ ಅನರ್ಥವು ಸಂಭವಿಸುವದು''

"ನಿಮ್ಮಲ್ಲಿ ಎಷ್ಟೋಜನರು ರಾಷ್ಟ್ರಧರ್ಮವನ್ನು ಅರಿಯದವರಿರುವರು; ಎಷ್ಟೋ ಜನರು ಬುದ್ಧಿಪೂರ್ವಕವಾಗಿ ಸ್ವಾರ್ಥದ ಕಡೆಗೆ ಮನವೆಳಿಸಿ ಬೇಕಾದಂತಹ ಪಾತಕಗಳನ್ನು ಮಾಡಲು ಸಿದ್ಧರಿರುವರು. ಸ್ವಾಭಿಮಾನಶೂನ್ಯರೂ, ಗೃಹಕಲಹಗಳಿಗೆ ತವರುಮನೆಯಾದವರೂ, ಸ್ವಜನದ್ರೋಹಿಗಳೂ, ದೇಶಹಿತ ಘಾತಕಿಗಳೂ ಆದ ಜನರಿಂದಲೇ ರಾಜ್ಯದ ಸ್ವಾತಂತ್ರ್ಯವು ಹರಣವಾಗುತ್ತದೆ. ಮಂಗಳೀಶರು ಅನ್ಯಾಯವಾಚರಿಸುತ್ತಿರುವದು ಜಗತ್ತಿನ ನಿದರ್ಶನಕ್ಕೆ ಬಂದಿದ್ದರೂ, ಸ್ವಾರ್ಥಿಗಳೂ, ದೇಶಘಾತಕಿಗಳೂ, ಮಾತೃದ್ರೋಹಿಗಳೂ ಆದ ಜನರು ಅವರಿಗೆ ಯಾವ ಯಾವ ಬಗೆಯಿಂದ ನೆರವಾಗುತ್ತಿರುವರೆಂಬದು ಪ್ರತ್ಯಕ್ಷ ಪ್ರಮಾಣದ ಮಾತಾಗಿದೆ. ಸತ್ಯವನ್ನು ನಾಶಗೊಳಿಸಿ ಅಸತ್ಯವನ್ನು ಪ್ರಸ್ಥಾಪಿಸುವದಕ್ಕೆ ಹೆಣಗುವದೆಂದರೆ, ಇಹ-ಪರಗಳಲ್ಲಿ ದುಃಖವನ್ನು ಭೋಗಿಸುವದಕ್ಕೆ ಸಿದ್ಧರಾದಂತೆಯೇ ಸರಿ! ಮೊದಲು ಅಸತ್ಯಕ್ಕೆ ವಿಜಯವಾದಂತೆ ತೋರಿದರೂ ಕಡೆಗೆ ಸತ್ಯಕ್ಕೆ ವಿಜಯವಾಗಿ 'ಸತ್ಯಮೇವ ಜಯತೆ' ಎಂಬ ಪ್ರಮಾಣೋಕ್ತಿಯ ದೃಷ್ಟಾಂತವು ಪ್ರತಿಯೊಬ್ಬರಿಗೆ ಆಗದಿರಲಾರದು. ನೀವೆಲ್ಲರು ಇನ್ನು ಮೇಲಾದರೂ ಸತ್ಯದ ಬೆನ್ನು ಹತ್ತಿದರೆ ಸುಖ ಹೊಂದುವಿರಿ. ಅಸತ್ಯದ ಬೆನ್ನು ಹತ್ತಿದರೆ ಆತ್ಮಘಾತ ಮಾಡಿಕೊಂಡ ಅಪಕೀರ್ತಿಯು ಆಚಂದ್ರಾರ್ಕವಾಗಿ ನಿಮ್ಮ ಪಾಲಿಗೆ ಕಟ್ಟಿಡುವದು.''

ಪುಲಿಕೇಶಿಯು ಎಷ್ಟು ವಿಧದಿಂದ ತಿಳಿಸಿ ಹೇಳಿದರೂ ಜನರು

ಅವನನ್ನು ಮುಂದೆ ಬಿಡದಾದರು. ಇದನ್ನು ನೋಡಿ ಸತ್ಯವರ್ಮನು:

"ದೇಶತ್ಯಾಗ ಮಾಡಬೇಕೆನ್ನುವ ಪ್ರಭುಗಳ ನಿಶ್ಚಯವು ಬೇರೆ ಯಾಗುವಂತಿಲ್ಲ. ನೀವು ಸತ್ಯಮಾರ್ಗವನ್ನು ಹಿಡಿದರೆ ಅವರು ನಿಮಗೆ ಮುಂದೆ ಪ್ರಸನ್ನರಾಗಬಹುದು ಈಗ ನೀವು ಅವರಿಗೆ ಅಡ್ಡಿ ಮಾಡದೆ ಹಿಂದಿರುಗಿರಿ."

ಪುಲಿಕೇಶಿಯು ಪ್ರಯಾಣಕ್ಕೆ ಪ್ರಜಾಜನರಿಂದ ಅಡ್ಡಿಯಾಗಿರುವದನ್ನು ಕೇಳಿ, ವೀರಸೇನನು ಧಾವಿಸಿ ಅಲ್ಲಿಗೆ ಬಂದನು. ಆಗ ಅವನು ಅಧಿಕಾರಯುಕ್ತ ವಾಣಿಯಿಂದ:—

"ನಿಮ್ಮ ರಾಜರ ಬೆನ್ನು ಹತ್ತಿ ಹೋಗಬೇಕೆನ್ನುತ್ತಿದ್ದರೆ ಅವಶ್ಯವಾಗಿ ಹೋಗಬಹುದು; ಅವರ ಪ್ರಯಾಣಕ್ಕೆ ಯಾರು ತೊಂದರೆಯನ್ನುಂಟು ಮಾಡುವರೋ, ಅವರು ಭಯಂಕರ ದಂಡನೆಗೆ ಗುರಿಯಾಗಬೇಕಾಗುವದು."

ವೀರಸೇನನ ಈ ಮಾತುಗಳನ್ನು ಕೇಳಿದ ಕೂಡಲೆ ಜನರು ಪುಲಿಕೇಶಿಯನ್ನು ಮುಂದೆ ಹೋಗಗೊಟ್ಟರು ಎಷ್ಟೋ ಜನರು ಅನ್ಯಾಯದ ರಾಜ್ಯದಲ್ಲಿರಲಾರೆವೆಂದು ಅವನ ಹಿಂದೆ ನಡೆದರು. ಪುಲಿಕೇಶಿಯು ಮಾರ್ಗಕ್ರಮಣ ಮಾಡತೊಡಗಿದಕೂಡಲೆ ಜನರು ಘೋರೆಂದು ರೋದಿಸತೊಡಗಿದರು. "ಅಯ್ಯೋ ರಾಮಾ! ಚಾಲುಕ್ಯವಂಶ ವಿಭೂಷಿತ ರಾಮಾ! ಕ್ಷತ್ರಿಯ ಕುಲಾವತಂಸ ರಾಮಾ! ಪ್ರಜಾ ವಾತ್ಸಲ್ಯಭರಿತ ರಾಮಾ! ರಾಜರಾಜೇಶ್ವರ ಕುಲತಿಲಕ ರಾಮಾ! ಕೀರ್ತಿವರ್ಮಸುತ ಪುಲಿಕೇಶಿ ರಾಮಾ! ನೀನು ನಮ್ಮನ್ನು ತೊಲಗಿದೆಯಾ! ಅರಿಬಲದಲನ ಸಂಗ್ರಾಮ ರಾಮಾ, ನೀನು ರಾಜ್ಯದ ವಿಯೋಗ ಮಾಡಿದೆಯಾ! ಇನ್ನು ನಮಗೆ ರಕ್ಷಕರಾರು?" ಎಂದು ಅವರು ಬೇಡಿಕೊಳ್ಳುತ್ತಿರುವಷ್ಟರಲ್ಲಿ ಪುಲಿಕೇಶಿಯ ರಥವು ಪರಿವಾರ ಸಹಿತವಾಗಿ ಕಣ್ಣು ಮರೆಯಾಗಿ ಎತ್ತೋ ಹೊರಟು ಹೋಯಿತು!

ಪ್ರಜಾಜನರು ಮಂಗಳೇಶ-ವಿನಯಾಂಬಿಕೆಯರನ್ನೂ, ವೀರಸೇನ-ಶಿವವರ್ಮರನ್ನೂ ಮನಸೋಕ್ತವಾಗಿ ನಿಂದಿಸುತ್ತ ಅತ್ಯಂತ

ದುಃಖದಿಂದ ಮನೆಯನ್ನು ಸೇರಿದರು; ಪುಲಿಕೇಶಿಯ ರಾಜ್ಯವಿಯೋಗವು ರಾಮರಾಜ್ಯ ವಿಯೋಗದಂತೆ ಪರಿಣಮಿಸಿತೆಂದು ಹಿಂದೇ ಮಾತಿನಲ್ಲಿ ಹೇಳಿಬಿಟ್ಟರೆ, ಪುರಾಣಜ್ಞ ವಾಚಕಮಹಾಶಯರಿಗೆ ಕಲ್ಪನೆಯಾಗಬಹುದು.

ಪುಲಿಕೇಶಿಯು ವಾತಾಪಿಪುರದ ಗಡಿಯನ್ನು ದಾಟಿದನೆಂಬ ವರ್ತಮಾನವು ತಿಳಿದ ಕೂಡಲೆ ಮಂಗಳೇಶನು ಕಡು ಹರುಷಿತನಾದನು. ಅವನಿಗೆ ಸ್ವರ್ಗವು ಮೂರೇ ಗೇಣು ಉಳಿದಿತ್ತು. ಅದ್ವಿತೀಯ ಬುದ್ಧಿಸಾಮರ್ಥ್ಯದಿಂದಲೂ, ಶರೀರ ಸಾಮರ್ಥ್ಯದಿಂದಲೂ ಸಾಹಸ ನಡೆಯಿಸಿದ್ದರಿಂದ, ವಿಜಯಲಕ್ಷ್ಮಿಯು ತನ್ನ ಕೊರಳಲ್ಲಿ ಮಾಲೆ ಹಾಕಿದಳೆಂದು ಮಂಗಳೇಶನು ಸಂತೋಷಪೂರಿತನಾದನು. ರಾಮರಾಜ್ಯವಿಯೋಗದಿಂದ ಕೈಕೇಯಿಗಾದಷ್ಟು, ಕಿಂಬಹುನಾ ಅದಕ್ಕಿಂತ ಹೆಚ್ಚಾದ ಆನಂದವು ವಿನಯಾಂಬಿಕೆಗಾಯಿತು!

---

## ವಿಲಕ್ಷಣ ಸೇಡು!



ಆಶ್ವೀನ ಶುದ್ಧ ನವಮಿಯ ದಿವಸದ ರಾತ್ರಿಯ ಮೊದಲನೆಯ ಪ್ರಹರವಾಗಿತ್ತು. ಆಮಂತ್ರಿತ ಮಾಂಡಲಿಕರಾಜರೂ, ಎರಡನೆಯ ದೇಶದ ಅರಸರೂ, ಸರದಾರ-ಸುಭೇದಾರರೂ ಒಬ್ಬರೂ ಬಾರದ್ದರಿಂದ, ಮಂಗಳೇಶನು ವಿಚಾರದಲ್ಲಿ ಮುಳುಗಿ ಕುಳಿತಿದ್ದನು. ತನ್ನ ಅಪಮಾನ ಮಾಡುವದಕ್ಕಾಗಿ ಹೀಗೆ ಮಾಡಿರಬಹುದೆಂದು ಅವನು ಎಲ್ಲರ ಮೇಲೆ ಕ್ರೋಧಗೊಂಡಿದ್ದನು. ತನ್ನ ಪುಂಡಮಂಡಲೇಶ್ವರರಾದ ಅಪ್ಪಾಯಿಕ, ರಾಷ್ಟ್ರಕೂಟರ ಗೋವಿಂದರಾಜ ಮೊದಲಾದ ಸ್ನೇಹಿತರು ಬಾರದ್ದರಿಂದಂತೂ ಅವನು ಹಳ್ಳಿಯ ಗೊಂದಲದಲ್ಲಿ ಬಿದ್ದನು. ಅವನು ಇದರ ಬಗ್ಗೆ ಚರ್ಚೆ ಮಾಡುವದಕ್ಕಾಗಿ ಶಿವವರ್ಮನನ್ನೂ, ವೀರಸೇನನನ್ನೂ ಕರೆಯಿಸಿದ್ದನು.

ಅಷ್ಟರಲ್ಲಿ ಇಬ್ಬರು ಕುದುರೆಯ ಸ್ವಾರರು ಧಾವಿಸಿ ಅಲ್ಲಿಗೆ ಬಂದು, ಮಂಗಳೇಶನಿಗೆ ವಂದನೆಗಳನ್ನರ್ಪಿಸಿ:—"ಮಹಾರಾಜರೇ, ನಮ್ಮ ಅರಸರಾದ ಗೋವಿಂದರಾಜರು ಸೈನ್ಯಸಹಿತವಾಗಿ ಸಮಾರಂಭಕ್ಕಾಗಿ ಹೊರಟಿದ್ದರು. ದಾರಿಯಲ್ಲಿ ಪ್ರತಾಪವರ್ಮನು ಗಂಟು ಬಿದ್ದಿರುವನು. ಇಲ್ಲಿಂದ ಸಹಾಯವು ಹೋದ ಹೊರತು ಅವರ ಮುಕ್ತತೆಯಾಗುವಂತಿಲ್ಲ. ಶಿವವರ್ಮರೊಡನೆ ಹೇರಳವಾಗಿ ಸೈನ್ಯವನ್ನು ಕೊಟ್ಟು ಕಳುಹಿಸುವದಕ್ಕಾಗಿ ಅವರು ತಿಳಿಸಿರುವರು."

ಆ ಸವಾರರ ಮಾತುಗಳನ್ನು ಕೇಳಿ ಮಂಗಳೇಶನು ಕ್ರೋಧ ಸಂತಪ್ತನಾದನು. ಯಃಕಶ್ಚಿತನಾದ ಒಬ್ಬ ಪುಂಡ ಬಂಡುಗಾರನು ನನ್ನ ಮಂಡಲೇಶ್ವರನನ್ನು ಕೆಣಕಿದನೇ! ಶಿವವರ್ಮರೇ, ನೀವು ನಿಮ್ಮ ಸೈನ್ಯದೊಡನೆ ಈಗಲೇ ನಡೆಯಿರಿ. ಪ್ರತಾಪವರ್ಮನ ಶಿರಸ್ಸನ್ನು ಭಾಲೆಯ ತುದಿಗೆ ಚುಚ್ಚಿಕೊಂಡೇ ರಾಜಧಾನಿಗೆ ಬರಬೇಕು!"

"ಪ್ರತಾಪನ ಕೊಬ್ಬನ್ನು ಬಿಡಿಸುವೆನು. ಚಾಲುಕ್ಯಸೇನಾಪತಿಯ ಕೈಯು ಅವನಿಗೆ ಗೊತ್ತಿಲ್ಲವೆಂಬಂತೆ ಕಾಣುತ್ತದೆ. ಅವನ ನೂರು ವರ್ಷಗಳ ಆಯುಷ್ಯವು ಇಂದು ತುಂಬಿದಂತೆಯೇ ಸರಿ." ಎಂದು ಶಿವವರ್ಮನು ನುಡಿದು:—

"ಮಹಾರಾಜರೇ, ನಾನು ಈಗಲೇ ಸೈನ್ಯಸಹಿತವಾಗಿ ಹೊರಡುವೆನು."

"ಇಂತಹ ಪ್ರಸಂಗದಲ್ಲಿ ವಿಲಂಬ ಮಾಡುವ ಕಾರಣವಿಲ್ಲ. ನಿಮ್ಮ ಎಲ್ಲ ಸೈನಿಕರನ್ನೂ ಕರೆದುಕೊಂಡು ಹೋಗಿರಿ." ಎಂದು ವೀರಸೇನನು ಹೇಳಿದನು. ಕೂಡಲೆ ಶಿವವರ್ಮನು ಆ ಸವಾರರನ್ನೊಡಗೊಂಡು ಪಾಳ್ಯಕ್ಕೆ ಹೋದನು. ಅವನು ಒಳ್ಳೆಯ ಲಗುಬಗೆಯಿಂದ ಸೈನ್ಯವನ್ನು ಸಿದ್ಧಪಡಿಸಿಕೊಂಡು ರಾಜಧಾನಿಯನ್ನು ಬಿಟ್ಟು ತೆರಳಿದನು.

"ಚಂದ್ರಸೇನಾ, ಪುಲಿಕೇಶಿಯು ಹೋದಂದಿನಿಂದ ನನ್ನ ಮನಸ್ಸು ಒಳ್ಳೆಯ ಆನಂದಮಯ ಸ್ಥಿತಿಯಲ್ಲಿರುವದು. ಅವನು ನಮ್ಮ

ಮಾರ್ಗದಲ್ಲಿ ಘನತರವಾದ ಕಂಟಕವಾಗಿದ್ದನು. ತಾನಾಗಿ ರಾಜ್ಯ ವನ್ನು ತ್ಯಜಿಸಿದ್ದರಿಂದ, ನನಗೆ ಇಂದ್ರಪದವು ದೊರೆತಷ್ಟು ಆನಂದ ವಾಗಿದೆ" ಎಂದು ಮಂಗಳೇಶನು ಹಿರಿ-ಹಿರಿ ಹಿಗ್ಗುತ್ತ ನುಡಿದ ಕೂಡಲೆ, ವೀರಸೇನನು ಮಾರ್ಮಿಕವಾಣಿಯಿಂದ:—"ಮಹಾರಾ ಜರೇ, ಆನಂದವಾಗದೇನು? ಅನೇಕ ವಿಧವಾಗಿ ಸಾಹಸ ಮಾಡಿ ದರೆ, ಕಷ್ಟಸಾಧ್ಯವಿರುವ ಕಾರ್ಯಗಳು ತಾವಾಗಿ ಸಾಧಿಸತೊಡಗಿದ ಮೇಲೆ ಯಾರಿಗೆ ಆನಂದವಾಗಲಿಕ್ಕಿಲ್ಲ? ಹಿಂದಿನ ಆನಂದವನ್ನೇನು ಮಾಡುವಿರಿ? ಮುಂದಿನ ಆನಂದಮಯಸ್ಥಿತಿಯು ಕಲ್ಪನೆ ಮಾಡಿ ದರೆ ಅತ್ಯಾನಂದವೆನಿಸುವದು." ಹೀಗೆ ನುಡಿದು, ವೀರಸೇನನು ಹಿಮ್ಮೆ ಹೊರಗೆ ಹೋಗಿ ಬಂದನು. ಅಷ್ಟರಲ್ಲಿ ವಿನಯಾಂಬಿಕೆಯು ಅಲ್ಲಿಗೆ ಬಂದು:—

"ಚಂದ್ರಸೇನಾ, ಸಮಾರಂಭಕ್ಕೆ ಯಾವ ಮಂಡಲಾಧೀಶ್ವ ರರೂ ಬರಲಿಲ್ಲವಲ್ಲ?"

"ಏತಕ್ಕೆ ಬಂದಾರು, ಈ ಸ್ಮಶಾನ ಸಮಾರಂಭಕ್ಕೆ!"

"ಏನೋ, ಹೀಗೇಕೆ ಮಾತನಾಡುವಿಯೋ? ಮೈಮೇಲೆ ಪ್ರಜ್ಞೆ ಇರುವದೋ-ಇಲ್ಲವೋ?" ಎಂದು ವಿನಯಾಂಬಿಕೆಯು ನುಡಿ ಯಲು, ಅವನು ಗಹಗಹಿಸಿ ನಗುತ್ತ:—

"ಮಂಗಳೇಶನ ಸ್ಮಶಾನಾರೋಹಣ ಸಮಾರಂಭಕ್ಕೆ ಯಾರು ಬರುವರು? ವಿನಯಾಂಬಿಕೇ! ನಾನು ಎಚ್ಚರದಿಂದಲೇ ಮಾತನಾ ಡುವೆನು"

ವೀರಸೇನನ ಮಾತುಗಳನ್ನು ಕೇಳಿದೊಡನೆಯೇ ಮಂಗಳೇ ಶನ ಕ್ರೋಧವು ಮಸ್ತಕಕ್ಕೇರಿತು. ಅವನು ಆವೇಶದಿಂದ:—

"ಎಲೋ, ಯಾರಿರುವಿರಿ? ಬೇಗನೆ ಬರ್ರಿ! ಈ ನೀಚನು ಮದ್ಯಪಾನ ಮಾಡಿದಂತೆ ತೋರುತ್ತದೆ. ಇವನನ್ನು ಬಂಧಿಸಿ ಕಾರಾ ಗೃಹದಲ್ಲಿ ಹಿಗೆಯಿರಿ!"ಎಂದು ಮಂಗಳೇಶನು ಹಿದರಾಡತೊಡಗಿದ ಕೂಡಲೆ ಇಪ್ಪತ್ತು-ಇಪ್ಪತ್ತೆರಡು ಜನರು ಅರಮನೆಯನ್ನು ಧುಮುಕಿ:

"ಮಹಾರಾಜರೇ, ಅಪ್ಪಣೆಯಾಗಬೇಕು" ಎಂದು ಕೈ ಜೋ-ಡಿಸಿ ನುಡಿದರು.

"ಈ ಕುಲಾಂಗಾರನನ್ನು ಬಿಗಿದು ಕಾರಾಗೃಹದಲ್ಲಿ ಹಾಕಿರಿ." ಎಂದು ನುಡಿದ ಕೂಡಲೆ ಅವರೆಲ್ಲರೂ ಹೋಗಿ ಮಂಗಳೇಶನನ್ನು ಹಗ್ಗದಿಂದ ಬಂಧಿಸತೊಡಗಿದರು

"ಎಲಾ! ಇದೇನು?" ಎಂದು ಮಂಗಳೇಶನು ಚೀರತೊಡಗಿದ ಕೂಡಲೆ ವೀರಸೇನನು ನಗುತ್ತ:—

"ರಾಜಾಜ್ಞೆಯಂತೆ ಅವರು ಬಿಗಿಯತೊಡಗಿರುವರು. ನಿನ್ನನ್ನು ಬಂಧಿಸಿ, ಅನೇಕ ಬಗೆಯ ಯಾತನೆಗೊಳಿಸಿ ಕೊಲ್ಲಬೇಕೆಂದು ಅವರಿಗೆ ಪುಲಿಕೇಶಿ ಮಹಾರಾಜರ ಅಪ್ಪಣೆಯಾಗಿದೆ," ಎಂದು ನುಡಿದ ಕೂಡಲೆ ವಿನಯಾಂಬಿಕೆಯು:—

"ಘಾತವು! ಘಾತವು!! ಅರಮನೆಯಲ್ಲಿ ವೈರಿಗಳ ಪ್ರವೇಶ ವಾಗಿರುವದು. ಬೇಗನೆ ನಯನಸೇನನನ್ನು ಸೈನ್ಯ ತೆಗೆದುಕೊಂಡು ಬರುವದಕ್ಕಾಗಿ ಹೇಳಿರಿ ಚಂದ್ರಸೇನನು ನಮ್ಮಿಂದ ಹಿಡೆದು ಹೋ ದಂತೆ ಕಾಣುವದು!" ಎಂದು ಚೀರಾಡುತ್ತ ಕಾವಲುಗಾರರಿಗೆ ಹೇಳಿ ದಳು. ಅವರಾರೂ ಅವಳ ಮಾತುಗಳನ್ನು ಲಕ್ಷಿಸಲಿಲ್ಲ. ಅಷ್ಟರಲ್ಲಿ ನಯನಸೇನನೇ ಅಲ್ಲಿಗೆ ಬಂದು:—

"ವಿನಯಾಂಬಿಕೇ, ಅವಿನಯ ದುರ್ಗಿಯೇ! ನಯನಸೇನನು ಈಗಾಗಲೆ ಅರಮನೆಯನ್ನು ಮುತ್ತಿರುವನು. ವಾತಾಪಿಪುರ ರಾಜ ಧಾನಿಯು ಈಗ ಪುಲಿಕೇಶಿ ಮಹಾರಾಜರ ಹಸ್ತಗತವಾಗಿರುವದು. ಕುಲಾಂಗಾರನಾದ ಮಂಗಳೇಶನು ನಮ್ಮ ಸೆರೆಯಲ್ಲಿ ಸಿಕ್ಕಿರುವನು."

"ಅಯ್ಯೋ! ಘಾತವು! ಸರ್ವಸ್ವವೂ ಘಾತವು!" ಎಂದು ನುಡಿದು, ವಿನಯಾಂಬಿಕೆಯು ಭೂಮಿಗೆ ಬಿದ್ದಳು. ನಯನಸೇನನ ಸೈನಿಕರು ಅವಳನ್ನು ಬಂಧಿಸಿ ವೀರಸೇನನ ಬಳಿಗೆ ಒಯ್ದರು.

ವೀರಸೇನನು ಆಸನದ ಮೇಲೆ ಕುಳಿತಿದ್ದನು. ಮಂಗಳೇಶ-ವಿನಯಾಂಬಿಕೆಯರು ಬಂಧಿಸಲ್ಪಟ್ಟು, ಯಃಕಶ್ಚಿತ ಅಪರಾಧಿಗಳಂತೆ

ಆತನ ಸಮ್ಮುಖದಲ್ಲಿ ನಿಲ್ಲಿಸಲ್ಪಟ್ಟಿದ್ದರು ಆಗ ವೀರಸೇನನು ದರ್ಪ ಯುಕ್ತವಾಣಿಯಿಂದ:—

"ಮಂಗಳೇಶಾ, ನಾನು ಯಾರೆಂಬದರ ಗುರುತು ನಿನಗಿರುವ ದೇನು? ನೀನು ಯಾವನನ್ನು ಭೀಷಣವಾದ ರೀತಿಯಿಂದ ವಧಿಸಿದ್ದೆಯೋ, ಆ ಸ್ವಾಮಿರಾಜನ ಪುತ್ರನಾದ ವೀರಸೇನನೆಂಬನು ನಾನೇ. ಈ ನಯುವಸೇನನೆಂಬವನೇ ನನ್ನ ತಮ್ಮನಾದ ವಿಮಲಸೇನನು. ನೀನು ಸ್ವಾರ್ಥಿಯೂ, ಪುಲಿಕೇಶಿ ಮಹಾರಾಜರ ದ್ರೋಹಚಿಂತನೆ ಮಾಡುವವನೂ ಎಂಬದು ನನ್ನ ತಂದೆಯವರಿಗೆ ಗೊತ್ತಾದ್ದರಿಂದಲೇ, ಅವರು ನಿನ್ನ ವಿರುದ್ಧವಾಗಿ ನಡೆದರೇ ಹೊರತು, ಅವರು ಚಾಲುಕ್ಯ ಸಾಮ್ರಾಜ್ಯಕ್ಕೆ ಹಗೆಗಳಾಗಬೇಕೆಂದು ಬುದ್ಧರಾಜನನ್ನು ಕೂಡಲಿಲ್ಲ. ಅದಕ್ಕಾಗಿ ನೀನು ಎಲ್ಲ ಜನರ ಮಾತು ಮೀರಿ ಯಾವ ರೀತಿಯಿಂದ ಅವರ ಕೊಲೆಮಾಡಿಸಿರುವೆಯೆಂಬದು ನಿನ್ನ ಸ್ಮರಣೆಯಲ್ಲಿರುವದೋ? ನಾವೀರ್ವ ಬಂಧುಗಳು 'ಸೇಡು-ಸೇಡು!' ತೀರಿಸಿಕೊಳ್ಳುವ ಭಾವನೆಯಿಂದಲೇ ನಿನ್ನಲ್ಲಿ ಸೇವಾವೃತ್ತಿಯನ್ನು ಕೈಕೊಂಡೆವು. ನಿನ್ನ ಪರಿವಾರದಿಂದ ಇಂದು ಪುಲಿಕೇಶಿ ಮಹಾರಾಜರಿಗೆ ಅಪಾಯವಾಗಬಾರದೆಂದು ಅವರನ್ನು ತೀರ್ಥ-ಯಾತ್ರೆಯ ನೆವದಿಂದ ಪುರತ್ಯಾಗ ಮಾಡಿಸಿದೆವು. ನಿನ್ನ ಮಂಡಲಾಧೀಶ್ವರರು ಇಲ್ಲಿಗೆ ಬಾರದಂತೆ ನಾವು ವ್ಯವಸ್ಥೆ ಮಾಡಿರುವೆವು. ಸಿಂಹಾಸನಾರೋಹಣ ಸಮಾರಂಭವು ಬಲಿಪ್ರತಿಪದೆಗೆ ನೆರವೇರುವದೆಂದು ಎಲ್ಲರಿಗೂ ಗುಪ್ತರೀತಿಯಿಂದ ರಾಜಮುದ್ರೆಯ ಪತ್ರಗಳನ್ನು ಕಳುಹಿಸಿರುವೆವು. ನಿನ್ನ ಮೇಲೆ ನಿಷ್ಠೆಯುಳ್ಳವನಾದ ಶಿವವರ್ಮನು ಇಲ್ಲಿದ್ದರೆ, ನಮ್ಮ ಕಾರ್ಯಕ್ಕೆ ಬಾಧೆಬರಬಹುದೆಂದು ಅವನು ಸೈನ್ಯಸಹಿತವಾಗಿ ರಾಜಧಾನಿಯನ್ನು ಬಿಟ್ಟು ಹೋಗುವಂತೆ ನಾವು ಕಾರಸ್ಥಾನ ರಚಿಸಿದೆವು. ನನ್ನ ಬಂಧುವಾದ ಇವನ ಕೈಯಲ್ಲಿ ಪ್ರತಾಪವರ್ಮನ ಸೈನ್ಯ ಕೂಡಿಸಿ, ಎಲ್ಲ ಸೈನಿಕರ ಮನಸ್ಸನ್ನೂ ತಿರುಗಿಸಿಕೊಂಡೆವು. ಇಲ್ಲಿ ನಿನ್ನವರೆನ್ನುವವರು ಈಗ ಯಾರೂ ಇಲ್ಲ. ನಿನ್ನ ಸ್ಮಶಾನರೋಹಣ ಸಮಾರಂಭಕ್ಕೆ ಅವರು

ಯಾಕೆ ಇರುವರು?''

"ಚಂದ್ರಸೇನಾ!'' ಎಂದು ಮಂಗಳೇಶನು ಉದ್ಗಾರ ತೆಗೆಯಲು, ವೀರಸೇನನು:—

"ನನ್ನ ಹೆಸರು ವೀರಸೇನನೆಂದಿರುವದು!"

"ಪರಾಧಮಾ! ಕರಳಲ್ಲಿ ಕತ್ತರಿಯಾಡಿಸಿದೆಯಾ? ಅಯ್ಯೋ! ಏನು ಮಾಡಲಿ! ಶಿವವರ್ಮನು ಇಲ್ಲಿದ್ದರೆ, ನಿನ್ನ ಪಾರುಪತ್ಯವನ್ನು ಮಾಡುತ್ತಿದ್ದನು.''

"ಸದ್ಯಕ್ಕೆ ನಿನ್ನ ಪಾರುಪತ್ಯ ಮಾಡಿಯೇ ತೀರುವೆನು!'' ಎಂದಂದು ವೀರಸೇನನು ತನ್ನ ಖಡ್ಗವನ್ನು ಹಿಂದು, ಅವನ ಎದೆಗೆ ತಿವಿಯ ಹೋದನು. ಆಗ ವಿನಯಾಂಬಿಕೆಯು ದೈನ್ಯದಿಂದ:—

"ವೀರಸೇನಾ! ನನ್ನ ಸೌಭಾಗ್ಯವನ್ನು ಕಾಪಾಡು'' ಎಂದು ಕೈಮುಗಿದು ಬೇಡಿಕೊಳ್ಳತೊಡಗಿದಳು.

"ಏನು? ನಿನಗೆ ಸೌಭಾಗ್ಯದಾನವೆ! ಕಾಲತ್ರಯದಲ್ಲಿಯೂ ಆಗದ ಮಾತದು! ರಾಕ್ಷಸೀ! ಪುಲಿಕೇಶಿ ಮಹಾರಾಜರಿಗೆ ದೇಹಾಂತ ಶಾಸನವನ್ನು ವಿಧಿಸುವದಕ್ಕೆ ಸಿದ್ಧಳಾದ ನಿನ್ನಂತಹ ನರಪಿಶಾಚಿಗೆ ಸೌಭಾಗ್ಯದಾನವನ್ನು ಮಾಡಲಾರೆನು!'' ಎಂದು ನುಡಿದು, ತನ್ನ ಸೇವಕರನ್ನುದ್ದೇಶಿಸಿ:—

"ಇವಳನ್ನು ಈಗಲೇ ಕತ್ತಲೆಕೋಣೆಯಲ್ಲಿ ಹಾಕಿರಿ."

ವಿನಯಾಂಬಿಕೆಯು ಅಲ್ಲಿಂದ ಒಯ್ಯಲ್ಪಟ್ಟಳು. ಆಗ ಮಂಗಳೇಶನು ದೈನ್ಯವಾಣಿಯಿಂದ:—

"ವೀರಸೇನಾ, ಮನಸ್ಸಿನೊಳಗಿನ ಕುನುಸನ್ನು ಮರೆತು ಬಿಡು. ನಿನ್ನ ಸ್ವಾಮಿಯಾದ ಪುಲಿಕೇಶಿಗೆ ರಾಜ್ಯವನ್ನೊಪ್ಪಿಸಿ, ನಾನು ದೇಶತ್ಯಾಗ ಮಾಡುವೆನು.''

"ನೀನು ದೇಶತ್ಯಾಗ ಮಾಡುವದಕ್ಕಿಂತಲೂ ಪ್ರಾಣತ್ಯಾಗ ಮಾಡಬೇಕೆಂದೇ ನನ್ನ ಉತ್ಕಟೇಚ್ಛೆ ಇರುವದು. ನಿನಗೆ ಜೀವದಾನ ಕೊಟ್ಟರೆ, ಪಿತೃವಧೆ ಮಾಡಿದ ಪಾತಕವು ನನಗೆ ತಟ್ಟೀತು!''

ಎಂದು ವೀರಸೇನನು ಕಠೋರವಾಣಿಯಿಂದ ನುಡಿದು:—

"ಎಲೇ, ಏನು ನೋಡುವಿರಿ! ಇವನ ನಾಲಿಗೆಯನ್ನು ಸೀಳಿರಿ! ಕಣ್ಣು ಕಿತ್ತಿರಿ! ಚರ್ಮವನ್ನು ಸುಲಿಯಿರಿ! ಕಾದೆಣ್ಣೆಯನ್ನು ಮೈ-ಮೇಲೆ ಸುರುವಿರಿ! ಅಂಗಾಂಗಗಳಿಗೆ ಬೆಂಕೀ ಹಚ್ಚಿರಿ!"

ವೀರಸೇನನು ಕ್ರೂರ ಹೃದಯಿಯಾಗಿ ಹೀಗೆ ಆಜ್ಞೆಯಿತ್ತ ಕೂಡಲೆ ಕೊಲೆಗಡಕರು ಮುಂದಾದರು. ಮಂಗಳೇಶನು ವೀರ ಸೇನನಿಗೆ ಕೈ ಜೋಡಿಸಿ:—

"ವೀರಸೇನಾ! ನನ್ನಿಂದ ಅಪರಾಧವಾಗಿರುವದು. ಕ್ಷಮಿಸಿ, ಉದ್ಧಾರ ಮಾಡು!!"

"ಕ್ಷಮೆಯೇ! ನಿನ್ನಂತಹ ಕ್ರೂರಹೃದಯಿಗೆ ಕ್ಷಮೆಯೆ? ನರಾಧಮಾ! ನೀನು ಈಗ ಎಷ್ಟು ಜನರ ಕೊಲೆ ಮಾಡಿರುವೆಯೆಂಬದರ ಕಲ್ಪನೆಯಿದೆಯೋ? ಪಟ್ಟಬಾಧ್ಯನಾದವನನ್ನು ಪದಚ್ಯುತಿಗೊಳಿಸಿ ಸೌಖ್ಯವನ್ನು ಪಡೆಯಬೇಕೆಂಬ ಹಂಬಲದಿಂದ ನೀನು ಅನೇಕ ಹೊ-ಲ್ಲದ ಕಾರ್ಯಗಳನ್ನು ಮಾಡಿರುವೆ. ಪರಮಾತ್ಮನು ಸತ್ಯಕ್ಕೆ ವಿಜಯ ವನ್ನು ಕೊಡುವನೆಂಬ ದೃಷ್ಟಾಂತವನ್ನು ಜಗತ್ತಿಗೆ ತೋರಿಸಿ, ಸತ್ಯ ಮೇವ ಜಯತೆ ಎಂಬ ಸಿದ್ಧಾಂತ ವಾಕ್ಯವನ್ನು ಚಾಲುಕ್ಯ ಸಾಮ್ರಾ ಜ್ಯದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಪ್ರಕಟಿಸಬೇಕಾಗಿದೆ! ಅಂದಮೇಲೆ ನಿನಗೆ ಕ್ಷಮೆಯು ಹೇಗೆ ದೊರೆಯಬೇಕು? ನಿನಗೆ ಕ್ಷಮಾದಾನ ಮಾಡಿದರೆ, ನಾನು ಪರಮಾತ್ಮನ ಓಲಗದಲ್ಲಿ ಅಪರಾಧಿ ಯೆಂದು ನಿರ್ಣಯಿಸಲ್ಪಡಲಿಕ್ಕಿಲ್ಲವೆ? ನೀಚತರವಾದ ಸ್ವಾರ್ಥಕ್ಕಾಗಿ ಅನ್ಯರ ಸ್ವತ್ತಿನ ಮೇಲೆ ತಮ್ಮ ಅಧಿಕಾರವನ್ನು ಪ್ರಸ್ಥಾಪಿಸಿ, ಬಾಧ್ಯ ಸ್ಥರನ್ನು ವನವಾಸ ದುಃಖವನ್ನು ಭೋಗಿಸ ಹಚ್ಚಿ, ತಾವು ಸೌಖ್ಯ ಲೋಲುಪರಾಗಬೇಕೆಂಬ ಅಸುರೀಲಾಲಸೆಯ ನಿನ್ನಂಥ ನರಾಧಮ ರಿಗೆ ಹೀಗೆ ಶಾಸನ ಮಾಡಬೇಕು" ಎಂದು ನುಡಿದವನೇ, ತನ್ನ ಖಡ್ಗವನ್ನು ಅವನ ಎದೆಯಲ್ಲಿ ಚುಚ್ಚಿದನು! ಕೂಡಲೆ ಮಂಗಳೇಶನು "ಅಯ್ಯೋ! ಅಯ್ಯೋ! ಸತ್ತೆನು! ಸತ್ತೆನು!" ಎಂದು ಚೀರುತ್ತ

ಭೂಮಿಗೆ ಬಿದ್ದನು.

ಹತಾಶನಾಗಿ ಬಿದ್ದ ಮಂಗಳೇಶನನ್ನು ವೀರಸೇನನು ಯಾವ ವಿಧದಿಂದ ಕೊಲ್ಲಿಸಿದನೆಂಬದರ ಕ್ರೂರಚಿತ್ರವನ್ನು ವಾಚಕ ಮಹಾಶಯರ ಮುಂದಿಡುವಂತಹ ಸ್ಥೈರ್ಯವು ನಮ್ಮ ಲೆಕ್ಕಣಿಕೆಯಲ್ಲಿಲ್ಲವೆಂದು ಹೇಳಬೇಕಾಗಿದೆ. ಅವನು ತನ್ನ ತಂದೆಯನ್ನು ಯಾವ ವಿಧದಿಂದ ಕೊಲೆ ಮಾಡಿಸಿದ್ದನೋ, ಅದಕ್ಕಿಂತ ಹೆಚ್ಚಾದ ಭೀಷಣ ಪ್ರಕಾರದಿಂದ ವೀರಸೇನನು ಅವನನ್ನು ಕೊಲ್ಲಿಸಿದನು. ವಿಲಕ್ಷಣವಾದ ರೀತಿಯಿಂದ ತನ್ನ ಸೇಡು ತೀರಿದ್ದಕ್ಕೆ ವೀರಸೇನನು ಕೃತಕೃತ್ಯನಾದೆನೆಂದು ಆನಂದಪಟ್ಟನು! ಅನ್ಯರ ಸ್ವತ್ತನ್ನು ಅಪಹರಿಸಿ ಅದರ ಮೇಲೆ ತನ್ನ ಸ್ವಾಮಿತ್ವವನ್ನು ನಡೆಯಿಸಬೇಕೆಂದು ಸಾಹಸ ನಡೆಯಿಸಿದ್ದ ಮಂಗಳೇಶನಿಗೆ ಯೋಗ್ಯ ಪ್ರಾಯಶ್ಚಿತ್ತವು ದೊರೆಯಿತೆಂದು ಎಲ್ಲರೂ ಸಂಭ್ರಮಗೊಂಡರು. ಅವನು ಸತ್ತದ್ದಕ್ಕೆ ಅತ್ತವರು ಅಲ್ಲಿ ಯಾರೂ ಇದ್ದಿಲ್ಲ!

---

## ಸತ್ಯಮೇವ ಜಯತೆ!



ವೀರಸೇನನು ಮಂಗಳೇಶನ ಕೊಲೆಯನ್ನು ಅತ್ಯಂತ ಭೀಷಣವಾದ ರೀತಿಯಿಂದ ಮಾಡಿಸಿದ ಸುದ್ದಿಯು ಬೆಳಗಾಗುವದರೊಳಗೆ ರಾಜಧಾನಿಯ ತುಂಬ ಪಸರಿಸಿತು. ಮಂಗಳೇಶನ ಪಕ್ಷದವರು ಈ ಸುದ್ದಿಯನ್ನು ಕೇಳಿದೊಡನೆಯೆ ಪಟ್ಟಣದಲ್ಲಿ ಬಂಡಾಯವೆಬ್ಬಿಸಿದರು ಕೊಲೆಯ ಸೇಡು ತೀರಿಸಿಕೊಳ್ಳುವದಕ್ಕಾಗಿ ಅವರು ವೀರಸೇನ-ವಿಮಲಸೇನರ ಮಂದಿರಗಳನ್ನು ಮುತ್ತಿದರು. ಎಷ್ಟೋ ಜನರು ರಾಜಧಾನಿಯಲ್ಲಿ ಕೊಲೆ-ಸುಲಿಗೆಗಳನ್ನು ಪ್ರಾರಂಭಿಸಿದರು. ವೀರಸೇನ-ವಿಮಲಸೇನರು ಬಂಡಾಯವನ್ನು ಶಾಂತ ಮಾಡುವದಕ್ಕೆ ಹಿಲ್ಲೆಯ ಸಾಹಸ ಮಾಡತೊಡಗಿದರು. ಅಷ್ಟರಲ್ಲಿ ಪ್ರತಾಪವರ್ಮನ ಸೈನ್ಯವೂ

ಅಲ್ಲಿಗೆ ಬಂದದ್ದರಿಂದ, ಬಂಡಾಯವು ಶಾಂತವಾಯಿತು. ವಿಮಲ ಸೇನನು ಸಶಸ್ತ್ರಸೈನಿಕರನ್ನು ರಾಜಧಾನಿಯ ತುಂಬ ಪಸರಿಸಿ, ಬಲ ನಾದ ಕಾವಲಿಟ್ಟನು.

ವೀರಸೇನನು ಯುಕ್ತಿ-ಪ್ರಯುಕ್ತಿಗಳಿಂದ ಶಿವವರ್ಮನ ಸೈನ್ಯ ವನ್ನು ರಾಜಧಾನಿಯನ್ನು ಬಿಡಿಸಿ ಕಳಿಸಿದ್ದನಷ್ಟೆ? ದಾರಿಯಲ್ಲಿ ಪ್ರತಾ ಪವರ್ಮನ ಸೈನ್ಯವು ಗಂಟು ಬಿದ್ದು, ಅವನ ಸೈನ್ಯವನ್ನು ನುಗ್ಗು- ನುಗ್ಗು ಮಾಡಿ ದಿಕ್ಕುಪಾಲಾಗಿ ಓಡಿಸಿಬಿಟ್ಟಿತು. ಆ ಮೇಲೆ ಪ್ರತಾ ಪವರ್ಮನು ವೀರಸೇನನ ಸಹಾಯಕ್ಕಾಗಿ ವಾತಾಪಿಪುರಕ್ಕೆ ಬಂದನು ಮುಂದಾಗಿ ಸೂಚಿಸಿದ ಮೇರೆಗೆ ವೇಳೆಗೆ ಸರಿಯಾಗಿ ಅವನು ನೆರವಿಗೆ ಬಂದದ್ದರಿಂದ, ವೀರಸೇನನಿಗೆ ಅತ್ಯಾನಂದವೆನಿಸಿತು. ಪ್ರತಾಪವ ರ್ಮನ ಸೈನಿಕರು ಬಂದಮೇಲೆ ಬಂಡಾಯವು ಶಾಂತವಾಗುವದಕ್ಕೆ ಬಹಳ ವೇಳೆಯು ಹಿಡಿಯಲಿಲ್ಲ ಎಲ್ಲ ಕಡೆಯಲ್ಲಿ ಶಾಂತತೆಯು ಪ್ರಸ್ಥಾಪಿತವಾದ ಮೇಲೆ ವೀರಸೇನನು ಪುಲಿಕೇಶಿಯನ್ನು ಕರೆತರುವ ದಕ್ಕಾಗಿ ಬಂಧುವಾದ ವಿಮಲಸೇನನನ್ನು ಸೈನ್ಯ ಸಹಿತವಾಗಿ ಕಳು ಹಿದನು. ಮಂಗಳೇಶನ ಮರಣವಾರ್ತೆಯನ್ನು ಕೇಳಿ, ಪುಲಿಕೇಶಿ- ವಿಜಯಾಂಬಿಕೆಯರು ಖೇದಗೊಂಡರು. ಅವನು ತಮಗೆ ಎಷ್ಟೋ ಬಗೆ ಯಿಂದ ಉಪದ್ರವವಿತ್ತಿದ್ದರೂ, ಅವನ ಸಾವು ಈ ಪ್ರಕಾರವಾಗಿ ಆಗಬಾರದಾಗಿತ್ತೆಂದು ಅವರು ಶೋಕಿಸಿದರು. ಕರ್ಮಕ್ಕೆ ತಕ್ಕ ಫಲ ವನ್ನು ಭೋಗಿಸಿದನೆಂದು ವಿಮಲಸೇನನು ಈರ್ವರನ್ನೂ ಸಂತೈಸಿ, ರಾಜಧಾನಿಗೆ ಕರೆತಂದನು.

ಪುಲಿಕೇಶಿಯ ಆಗಮನದಿಂದ ಪ್ರಜೆಗಳು ಸಂಭ್ರಮಗೊಂಡರು ಬಲುಮೆಯ ಆಳಿಕೆಯಿಂದ ಬೇಸತ್ತ ಅವರಿಗೆ ದಯಾಘನನೂ, ಸದ್ಗು ಣನಿಧಿಯೂ, ಪ್ರಜಾವತ್ಸಲನೂ ಆದ ರಾಜನ ಆಗಮನವು ಮಹೋ ತ್ಸವದಂತೆ ಪರಿಣಮಿಸಿದ್ದರೆ ಆಗಾಧವೇನು? ಎಲ್ಲ ನಾಗರಿಕರು ಹಿಗ್ಗಿಯ ಸಮಾರಂಭದಿಂದ ಆವನನ್ನು ಎದುರ್ಗೊಂಡು ಕರೆತಂದರು. ಸತ್ಪಕ್ಷಪಾತಿಯಾದ ಪರಮಾತ್ಮನು ಸತ್ಯಕ್ಕೆ ವಿಜಯವಿತ್ತು 'ಸತ್ಯ

ಮೇವ ಜಯತೆ' ಎಂಬ ವಾಕ್ಯವನ್ನು ಜಗತ್ತಿನ ಅನುಭವಕ್ಕೆ ತಂದು ಕೊಟ್ಟದ್ದಕ್ಕೆ ಅವರು ಆನಂದವುಳ್ಳವರಾದರು. ಆಸುರೀಲೋಭಕ್ಕೊಳಗಾಗಿ ಅನ್ಯರ ಸ್ವತ್ತನ್ನು ಬಲಾತ್ಕಾರದಿಂದ ಅಪಹರಿಸಿ, ಅದರ ಮೇಲೆ ತಮ್ಮ ಸ್ವಾಮಿತ್ವವನ್ನು ನಡೆಯಿಸಬೇಕೆನ್ನುವ ನೀಚವನನೋವೃತ್ತಿಯ ನರಾಧಮರು ಮಂಗಳೇಶನಂತೆ ಕೊಲೆಗೀಡಾಗುವರೆಂಬದರ ಅನುಭವವು ಎಲ್ಲ ಜನರಿಗೂ ಬಂದಿತು.

ಸತ್ಯವರ್ಮ, ಪ್ರತಾಪವರ್ಮ, ವೀರಸೇನ, ವಿಮಲಸೇನ ಮೊದಲಾದ ಸ್ವಾಮಿನಿಷ್ಠ ಜನರ ಅತುಲವಾದ ಸಾಹಸದಿಂದ ತನ್ನ ಗತವೈಭವವು ಲಭಿಸಿತೆಂದು ಪುಲಿಕೇಶಿಯು ಅವರಲ್ಲಿ ಅತ್ಯಂತ ಕೃತಜ್ಞತಾಭಾವವುಳ್ಳವನಾದನು. ಅವನು ವೀರಸೇನ-ವಿಮಲಸೇನರಿಗೆ ಎರಡನೆಯ ತರಗತಿಯ ಮಂತ್ರಿ-ಸೇನಾಧಿಪತ್ಯಗಳನ್ನು ಇತ್ತನು.

ಮಂಗಳೇಶನ ಪತ್ನಿಯಾದ ವಿನಯಾಂಬಿಕೆಯೂ, ಇಂದ್ರವರ್ಮನೂ ಕಾರಾಗೃಹದಲ್ಲಿಡಲ್ಪಟ್ಟಿದ್ದರು. ಪುಲಿಕೇಶಿಯು ಎಲ್ಲ ಅಪಕೃತಿಗಳನ್ನು ಮರೆತು, ಅವರ ಬಂಧವಿಮೋಚನೆ ಮಾಡಿದನು. ಇಂದ್ರವರ್ಮನು ದೊಡ್ಡವನಾದ ಮೇಲೆ ಹಿಂದು ಪ್ರಾಂತದ ಮಂಡಲಾಧೀಶ್ವರನನ್ನಾಗಿ ಮಾಡುವೆನೆಂದು ಪುಲಿಕೇಶಿಯು ವಿನಯಾಂಬಿಕೆಗೆ ಹೇಳಿದನು. ಅವನ ದೊಡ್ಡ ಮನಸ್ಸನ್ನು ನೋಡಿ ಪ್ರಜೆಗಳೆಲ್ಲರೂ ಅವನನ್ನು ಕೊಂಡಾಡಿದರು.

ಪ್ರತಾಪವರ್ಮನ ಸೈನಿಕರ ಹೊಡತಕ್ಕೆ ಚದರಿ ಹೋದ ಸೈನಿಕರನ್ನು ಕೂಡಿಸಿಕೊಂಡು ಮಾರನೆಯ ದಿನ ಶಿವವರ್ಮನು ವಾತಾಪಿ ಪುರದ ದಾರಿಯನ್ನು ಹಿಡಿದನು. ಅವನಿಗೆ ದಾರಿಯಲ್ಲಿ ಮಂಗಳೇಶನ ಮರಣದ ಸುದ್ದಿಯೂ, ವೀರಸೇನನ ಕೃಷ್ಣಕಾರಸ್ಥಾನವೂ ತಿಳಿಯಲು, ಅವನು ಸಂತಪ್ತನಾದನು. ರಾಜಧಾನಿಯು ಪುಲಿಕೇಶಿಯ ಪಕ್ಷದವರಿಗೆ ಸಂಪೂರ್ಣವಾಗಿ ವಶವಾದ್ದರಿಂದ, ಅವನು ಅದನ್ನು ಸ್ವವಶ ಮಾಡಿಕೊಳ್ಳಬೇಕೆಂದು ಸಾಹಸ ನಡೆಯಿಸಿದನು. ಮಂಗಳೇಶನ ಪುಂಡಮಂಡಲಾಧೀಶ್ವರರಾದ ಅಪ್ಪಾಯಿಕ-ಗೋವಿಂದರಿಗೆ

ಅವನ ಕೊಲೆಯ ಸುದ್ದಿಯನ್ನು ತಿಳಿಸಿ, ತನ್ನ ನೆರವಿಗೆ ಬರಬೇಕೆಂದು ಕೇಳಿಕೊಂಡನು. ಮಂಗಳೇಶನ ಹಸ್ತಗತವಾಗಿದ್ದ ಚಾಲುಕ್ಯಸಾಮ್ರಾಜ್ಯಕ್ಕೆ ಅವನ ಮಗನಾದ ಇಂದ್ರವರ್ಮನೇ ಒಡೆಯನಾಗಬೇಕೆಂದು ಅವನ ಮಹತ್ವಾಕಾಂಕ್ಷೆಯಾಗಿತ್ತು.

ಶಿವವರ್ಮನ ವಿನಂತಿಗೆ ಮಾನವನ್ನು ಕೊಟ್ಟು ಅಪ್ಪಾಯಿಕ-ಗೋವಿಂದರು ಅಸಂಖ್ಯಬಲದೊಂದಿಗೆ ಅವನ ಸಹಾಯಕ್ಕೆ ಬಂದರು. ಮಂಗಳೇಶನ ಭೀಷಣವಾದ ಕೊಲೆಯ ಸುದ್ದಿಯನ್ನು ಕೇಳಿ ಅವರಾಪರೂ ತಲೆ ತಿರುಗಿದವರಾಗಿದ್ದರು. ರಣದಲ್ಲಿ ಪುಲಿಕೇಶಿಯನ್ನು ಸಂಹರಿಸಿ, ವಾತಾಪಿಪುರದ ಚಾಲುಕ್ಯ ಸಿಂಹಾಸನದ ಮೇಲೆ ಇಂದ್ರವರ್ಮನನ್ನು ಕುಳ್ಳಿರಿಸಬೇಕೆಂಬ ಪ್ರತಿಜ್ಞೆ ಮಾಡಿಯೇ ಹೊರಟಿದ್ದರು.

ಶಿವವರ್ಮ, ಅಪ್ಪಾಯಿಕ, ಗೋವಿಂದ ಮೊದಲಾದ ಮಂಗಳೇಶನ ಅಭಿಮಾನಿಗಳು ಹೇರಳ ಸೈನ್ಯದೊಡನೆ ವಾತಾಪಿಪುರವನ್ನು ಮುತ್ತಿದರು. ಅವರ ಸೈನ್ಯವು ಪುಲಿಕೇಶಿಯ ಸೈನ್ಯಕ್ಕಿಂತ ಎಷ್ಟೋ ಪಾಲು ದೊಡ್ಡದಿದ್ದುದರಿಂದ ತಮ್ಮ ಅರಸನಿಗೆಲ್ಲಿ ಅಪಯಶವು ಪ್ರಾಪ್ತವಾಗುವದೋ ಎಂದು ಪುಲಿಕೇಶಿಯ ಪ್ರಜೆಗಳು ಗಾಬರಿಯಾದರು. ಚಂಡವಿಕ್ರಮನಾದ ಪುಲಿಕೇಶಿಯೂ, ರಣರಕ್ಕಸನಾದ ವೀರವರ್ಮನೂ, ಸಂಗ್ರಾಮಕೇಸರಿಯಾದ ಪ್ರತಾಪವರ್ಮನೂ, ನರಶಾರ್ದೂಲನಾದ ವಿಮಲಸೇನನೂ ಅತ್ಯಂತ ಸ್ಫೂರ್ತಿಯಿಂದ ಕಾದತೊಡಗಿದರು. ಕಡುಗಲಿಗಳ ಕಲಿತನದ ಮುಂದೆ ಎದೆಗೊಟ್ಟು ನಿಲ್ಲಲಾರದೆ, ಅರಿಬಲವು ಪಲಾಯನ ಮಾಡಿತು. ಶಿವವರ್ಮನು ಧಾರಾತೀರ್ಥದಲ್ಲಿ ಪತನ ಹೊಂದಿದನು!

ಅರಿಬಲವು ಎಷ್ಟೋ ದೊಡ್ಡದಿದ್ದರೂ ಪುಲಿಕೇಶಿಯು ಜಯಶಾಲಿಯಾದದ್ದನ್ನು ನೋಡಿ, ಸರ್ವ ಜನರು ವಿಸ್ಮಯಗೊಂಡರು! ಪರಮಾತ್ಮನು ಸತ್ಯಕ್ಕೆ ಜಯವನ್ನು ಕೊಡುವನೆಂಬ ಮಾತಿನ ಅನುಭವವು ಅವರಿಗೆ ಚನ್ನಾಗಿ ಬಂದಿತು.

ಪುಲಿಕೇಶಿಯು ಎಲ್ಲ ಕಡೆಯಲ್ಲಿಯೂ ಶಾಂತಿಯನ್ನು ನೆಲೆಗೊಳಿಸಿದನು. ತಿರುಗಿ ಬಿದ್ದ ಮಾಂಡಲಿಕ ಅರಸರು ಅವನಿಗೆ ವಶರಾಗಿ ವಿಧೇಯತ್ವದಿಂದ ನಡೆಯತೊಡಗಿದರು. ಇವನು ಸರ್ವೋತ್ಕೃಷ್ಟವಾದ ರೀತಿಯಿಂದ ರಾಜ್ಯಪರಿಪಾಲನೆ ಮಾಡತೊಡಗಿ ದಿಗಂತಖ್ಯಾತಿಯನ್ನು ಪಡೆದನು. ಇವನು ದಿಗ್ವಿಜಯ ಮಾಡಿ ಉತ್ತರಾಪಥದಲ್ಲಿ ತನ್ನ ವಿಜಯಾಶ್ವವನ್ನು ತಿರುಗಿಸಿದನು

ವಿಜಯಾಂಬಿಕೆ-ಪುಲಿಕೇಶಿಯರು ಸೀತಾರಾಮರಂತೆ ಸಾಮ್ರಾಜ್ಯದೊಳಗಿನ ಎಲ್ಲ ಪ್ರಜೆಗಳಿಗೆ ಪ್ರಿಯರಾಗಿದ್ದರು. ಈ ದಂಪತಿಗಳಿಗೆ ಇಂಥ ಅಭ್ಯುದಯದ ಸಮಯದಲ್ಲಿಯೇ ಪುತ್ರೋತ್ಸವವಾದದ್ದರಿಂದ ಕರ್ನಾಟಕ ಸಾಮ್ರಾಜ್ಯವು ಸ್ವಾನಂದಸಾಮ್ರಾಜ್ಯದಲ್ಲಿ ಮುಳುಗಿತು! ಈ ಪುತ್ರನೇ ಪುಲಿಕೇಶಿಯ ಹಿರಿಯಮಗನಾದ ಆದಿತ್ಯವರ್ಮನು.

